# ಗೌರವಾನ್ವಿತ ಟಿ.ಬಿ. ಮೆಕಾಲೆಯವರ ಜ್ಞಾಪನ ಪತ್ರ: ದಿನಾಂಕ : ಫೆಬ್ರವರಿ ೨-೧೮೩೫

1. ಇದು ಸಾರ್ವಜನಿಕ ಶಿಕ್ಷಣ ಸಮಿತಿಯಲ್ಲಿನ ಕೆಲವು ಮಹನೀಯರ ಅಭಿಪ್ರಾಯವೆಂಬಂತೆ ಕಂಡುಬರುತ್ತದೆ. ಅವರು ಈವರೆಗೆ ಅನುಸರಿಸುತ್ತಿರುವ ನೀತಿಯನ್ನು ೧೮೧೩ರಲ್ಲೇ ಬ್ರಿಟಿಷ್ ಸಂಸತ್ತು ಬಹಳ ಕಟ್ಟುನಿಟ್ಟಾಗಿ ರೂಪಿಸಿತ್ತು. ಈ ಅಭಿಪ್ರಾಯವು ಸರಿಯಿದ್ದ ಪಕ್ಷದಲ್ಲಿ, ಬದಲಾವಣೆಯನ್ನು ದೃಢಪಡಿಸಲು ಒಂದು ಶಾಸಕಾಂಗ ಕಾಯಿದೆಯು ಅವಶ್ಯಕವಾಗುತ್ತದೆ. ಇದಕ್ಕೆ ವ್ಯತಿರಿಕ್ತವಾದ ಹೇಳಿಕೆಗಳನ್ನು ಸಿದ್ಧಪಡಿಸುವ ಪಾತ್ರದಿಂದ ನಾನು ಅಂತರವನ್ನು ಕಾಯ್ದುಕೊಂಡಿದ್ದೇನೆ. ಅದೀಗ ನಮ್ಮ ಮುಂದಿದೆ. ಭಾರತೀಯ ಕೌನ್ಸಿಲ್‌ನ ಸದಸ್ಯನಾದ ನಾನು, ಅದು ನನ್ನ ಮುಂದೆ ಬರುವವರೆಗೂ, ಆ ವಿಷಯದ ಬಗ್ಗೆ ನಾನು ಹೇಳಬೇಕಾಗಿರುವುದನ್ನು ನನ್ನಲ್ಲಿಯೇ ಇಟ್ಟುಕೊಂಡಿದ್ದೇನೆ.
2. ಸಂಸತ್ತಿನ ಕಾಯಿದೆ ಅದಕ್ಕೆ ನೀಡಲಾಗಿರುವ ಅರ್ಥವನ್ನು ಸೂಚಿಸುವುದೆಂದು ನನಗೆ ಕಂಡು ಬರುವುದಿಲ್ಲ. ಅಧ್ಯಯನ ಮಾಡಬೇಕಾದ ನಿರ್ದಿಷ್ಟ ಭಾಷೆಗಳು ಹಾಗೂ ವಿಜ್ಞಾನಗಳನ್ನು ಅದು ಒಳಗೊಂಡಿರುವುದಿಲ್ಲ. ಸಾಹಿತ್ಯದ ಪುನರುಜ್ಜೀವನ ಹಾಗೂ ಅಭಿವೃದ್ಧಿಗಾಗಿ ಒಂದು ಭಾಗದ ಹಣವನ್ನು ತೆಗೆದಿಡಲಾಗಿದೆ. ಭಾರತದಲ್ಲಿರುವ ಕಲಿತ ಸ್ಥಳೀಯ ಜನಗಳನ್ನು ಪ್ರೋತ್ಸಾಹಿಸಿ, ಬ್ರಿಟಿಷ್ ಪ್ರಾಂತ್ಯಗಳಲ್ಲಿ ನೆಲೆಸಿರುವ ಪ್ರಜೆಗಳಿಗೆ ವಿಜ್ಞಾನಗಳ ಜ್ಞಾನವನ್ನು ಪರಿಚಯಿಸಿ ಅಭಿವೃದ್ಧಿಪಡಿಸಬೇಕಾಗಿದೆ. ಸಂಸತ್ತು ಸಾಹಿತ್ಯದ ಬಗ್ಗೆ ಹೇಳಿರುವುದನ್ನು ಸಂಸ್ಕೃತ ಮತ್ತು ಅರೇಬಿಕ್ ಸಾಹಿತ್ಯ ಮಾತ್ರವೆಂದು ಅರ್ಥೈಸಲಾಗುತ್ತಿದೆ ಮತ್ತು ಅದನ್ನು ಅದೇ ರೀತಿಯಾಗಿ ಪರಿಗಣಿಸಿ ವಾದಿಸಲಾಗುತ್ತಿದೆ. ಆದರೆ ಅವರಿಂದ ಅದಕ್ಕೆಂದಿಗೂ ಒಂದು ಗೌರವಾನ್ವಿತ ನಾಮಧೇಯವನ್ನು ಕೊಡಲಾಗಲಿಲ್ಲ. ಮಿಲ್ಟನ್ ಪದ್ಯಗಳು, ಲಾಕ್‌ನ ತತ್ತ್ವ ಮೀಮಾಂಸೆ ಮತ್ತು ನ್ಯೂಟನ್‌ನ ಭೌತಶಾಸ್ತ್ರ, ಇವುಗಳ ಪರಿಚಯವಿರುವ ಸ್ಥಳೀಯ ನಿವಾಸಿಗಳನ್ನು ಕಲಿತವರೆಂದು ಪರಿಗಣಿಸಬಾರದೆಂದು ವಾದಿಸಲಾಗುತ್ತಿದೆ. ಬದಲಿಗೆ ಹಿಂದೂಗಳ ಪವಿತ್ರ ಗ್ರಂಥಗಳನ್ನು ಅರಿತವರಿಗೆ ಮತ್ತು ದರ್ಭೆ ಹುಲ್ಲಿನ ಎಲ್ಲ ರೀತಿಯ ಬಳಕೆಗಳನ್ನು ಬಲ್ಲವರಿಗೆ ಮತ್ತು ದೈವದಲ್ಲಿ ಲೀನವಾಗುವ ಎಲ್ಲ ರಹಸ್ಯಗಳನ್ನು ತಿಳಿದವರನ್ನು ಮಾತ್ರ ಹಿಂದೂಗಳು ಎಂದು ತಿಳಿಯಲಾಗುತ್ತದೆ. ಅಂತಹವರಿಗೆ ಮಾತ್ರ ಕಲಿತ ನಿವಾಸಿಗಳೆಂಬ ಗೌರವ ನೀಡಬೇಕೆಂಬುದು ಅವರ ವಾದವಾಗಿತ್ತು. ಇದೊಂದು ಸಂತೃಪ್ತಿಕರ ವ್ಯಾಖ್ಯಾನವೆಂಬಂತೆ ಕಂಡು ಬರುವುದಿಲ್ಲ. ಇದಕ್ಕೆ ಸಮಾನಾಂತರವಾದ ನಿದರ್ಶನವೊಂದನ್ನು ನೋಡೋಣ: ಈಜಿಪ್ಟ್ ದೇಶ ಒಂದು ಕಾಲದಲ್ಲಿ ಯುರೋಪಿನ ಇತರ ರಾಷ್ಟ್ರಗಳಿಗಿಂತ ಜ್ಞಾನದಲ್ಲಿ ಮೇಲ್ಮಟ್ಟವನ್ನು

ಹೊಂದಿತ್ತು. ಆದರೆ ಇದೀಗ ಅದು ಅವುಗಳಿಗಿಂತ ಗಣನೀಯವಾಗಿ ಕುಸಿದಿದೆ. ಆಗಿದ್ದ ಈಜಿಪ್ಟಿನ 'ಫ್ಯಾರೋ' ಅಂದರೆ ರಾಜ್ಯಪಾಲ "ಈಜಿಪ್ಟಿನ ಕಲಿತ ನಿವಾಸಿಗಳನ್ನು ಪ್ರೋತ್ಸಾಹಿಸಲು ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ ಅಭಿವೃದ್ಧಿಪಡಿಸುವ" ಉದ್ದೇಶದಿಂದ ಒಂದು ನಿರ್ದಿಷ್ಟ ಮೊತ್ತದ ಹಣವನ್ನು ತೆಗೆದಿಟ್ಟಿದ್ದಾನೆ ಎಂದು ಭಾವಿಸೋಣ. ಇದರಿಂದ ಯಾರಾದರೂ ಅವನು ತನ್ನ 'ಪಚಾಲಿಕ್'ನ ಅಂದರೆ ಪ್ರಾಂತ್ಯದ ಯುವಜನರಿಗೆ ಪುರಾತನ ಚಿತ್ರಲಿಪಿಯ ಹಲವಾರು ವರ್ಷಗಳ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿದ್ದನೆಂದು ಊಹಿಸಬಹುದೆ? ಅಥವ ಒಸಿರಿಸ್ (Osiris) ನ ಮರಣೋತ್ತರ ಬದುಕಿನ ಕುರಿತಾದ ಪುರಾಣದ ಕಥೆಗಳ ಎಲ್ಲಾ ತತ್ತ್ವಗಳ ಅರ್ಥವೇನೆಂದು ಶೋಧಿಸಲು ಆ ಹಣವನ್ನು ಮೀಸಲಿಡಬೇಕಿತ್ತೇ? ಪ್ರಾಚೀನ ಕಾಲದ ಈಜಿಪ್ಟ್ನಲ್ಲಿ ಬೆಕ್ಕು ಹಾಗೂ ಈರುಳ್ಳಿಗಳನ್ನು ಗೌರವಿಸುತ್ತಿದ್ದ ಆಚರಣೆಗಳನ್ನು ಸಾಧ್ಯವಾದ ನಿಖರತೆಯಿಂದ ಕಂಡುಹಿಡಿಯಲು ಆ ಹಣವನ್ನು ಉಪಯೋಗಿಸಬೇಕೇ? ಹಳೆಯ ಕಾಲದ ಶಿಲಾಸ್ತಂಭಗಳ ಒಗಟುಗಳನ್ನು ಬಿಡಿಸುವಲ್ಲಿ ತನ್ನ ಯುವ ಪ್ರಜೆಗಳನ್ನು ನೇಮಿಸಿಕೊಳ್ಳದೆ ಅದಕ್ಕೆ ಬದಲಾಗಿ ಅವರಿಗೆ ಆಧುನಿಕ ವಿಜ್ಞಾನಗಳಿಗೆ ಪ್ರಮುಖ ಕೀಲಿಕೈ ಆದ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳನ್ನು ಕಲಿಸಬೇಕೆಂದು ಆಜ್ಞೆ ಮಾಡುತ್ತಿದ್ದನೆ?

3. ಹಳೆಯ ಪದ್ಧತಿಯ ಬೆಂಬಲಿಗರು ಅವಲಂಬಿಸಿರುವ ಪದಗಳು ಅವರನ್ನು ಸಮರ್ಥಿಸುವುದಿಲ್ಲ. ಬದಲಿಗೆ ಅನಂತರದ ಮಾತುಗಳು ನಿರ್ಣಾಯಕವಾಗಿವೆ ಎಂದು ತೋರಿಬರುತ್ತದೆ. ಈ ಲಕ್ಷಾಂತರ ರೂಪಾಯಿಗಳನ್ನು "ಭಾರತದಲ್ಲಿ ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವುದಕ್ಕೆ" ತೆಗೆದಿಡಬೇಕೆಂದಷ್ಟೇ ಅಲ್ಲದೆ, (ಅವರ ಇಡೀ ವ್ಯಾಖ್ಯಾನವು ಇದನ್ನು ಆಧರಿಸಿದೆ) "ವಿಜ್ಞಾನಗಳ ಜ್ಞಾನವನ್ನು ಬ್ರಿಟಿಷ್ ಪ್ರಾಂತ್ಯದ ಪ್ರಜೆಗಳಿಗೆ ಪರಿಚಯಿಸಲು ಮತ್ತು ಅಭಿವೃದ್ಧಿಪಡಿಸಲೂ" ತೆಗೆದಿಡಬೇಕೆಂದು ಅವರು ವಾದಿಸುತ್ತಾರೆ. ನಾನು ಹೇಳುತ್ತಿರುವ ಮಾತುಗಳು ಕಂಡು ಬರುತ್ತಿರುವ ಎಲ್ಲ ಬದಲಾವಣೆಗಳನ್ನು ಸಮರ್ಥಿಸಲು ಸಾಕಾಗುತ್ತವೆ."

4. ಕೌನ್ಸಿಲ್ ಸಭೆಯು ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡ ಪಕ್ಷದಲ್ಲಿ ಶಾಸಕಾಂಗ ಕಾಯಿದೆಯ ಆವಶ್ಯಕತೆಯಿರುವುದಿಲ್ಲ. ಅವರಿಗೆ ನನ್ನೊಂದಿಗೆ ವ್ಯತ್ಯಾಸವಿದ್ದಲ್ಲಿ, ಆಗ ನಾನು ತೊಡಕು ಉದ್ಭವಿಸುತ್ತಿರುವ ೧೮೧೩ ರ ಶಾಸನಾಧಿಕಾರದ ೧ನೇ ಕಲಂ ಅನ್ನು ರದ್ದುಮಾಡುವ ಒಂದು ಸಣ್ಣ ಕಾಯಿದೆಯನ್ನು ಪ್ರತಿಪಾದಿಸುತ್ತೇನೆ.

5. ನಾನು ಪರಿಗಣಿಸುತ್ತಿರುವ ವಾದವು ನಡಾವಳಿಯ ಸ್ವರೂಪದ ಮೇಲೆ ಮಾತ್ರ ಪ್ರಭಾವ ಬೀರುತ್ತದೆ. ಆದರೆ ಪೌರಸ್ತ್ಯ ಶಿಕ್ಷಣ ವ್ಯವಸ್ಥೆಯ ಪ್ರಶಂಸಕರು ಇನ್ನೊಂದು ವಾದವನ್ನು ಬಳಸಿದ್ದಾರೆ. ಅದನ್ನು ನಾವು ಒಪ್ಪಿಕೊಂಡು ಮಾನ್ಯ ಮಾಡಿದರೆ ಅದು ಎಲ್ಲ ಬದಲಾವಣೆಗಳ ವಿರುದ್ಧ

ಒಂದು ನಿರ್ಣಾಯಕವಾದ ನಡೆಯಾಗುತ್ತದೆ. ಸಾರ್ವಜನಿಕ ವಿಶ್ವಾಸವನ್ನು ಪ್ರಸಕ್ತ ವ್ಯವಸ್ಥೆಗೆ ನ್ಯಾಸವಾಗಿ ಇಡಲಾಗಿದ್ದು ಇದುವರೆಗೆ ಸಂಸ್ಕೃತ ಮತ್ತು ಅರಬ್ಬಿ ಭಾಷೆಗಳ ಅಧ್ಯಯನವನ್ನು ಪ್ರೋತ್ಸಾಹಿಸಲು ಮೀಸಲಾಗಿಟ್ಟಿದ್ದ ಹಣವನ್ನು ಬೇರೆ ಅಧ್ಯಯನಕ್ಕೆ ಬಳಸುವುದನ್ನು ಅವರು ಲೂಟಿ ಅಥವ ಸುಲಿಗೆಯೆಂದು ವ್ಯಾಖ್ಯಾನಿಸುತ್ತಾರೆ. ಯಾವ ವೈಚಾರಿಕ ಪ್ರಕ್ರಿಯೆಯಿಂದ ಅವರು ಈ ತೀರ್ಮಾನಕ್ಕೆ ಬರುತ್ತಾರೆಂದು ಅರ್ಥ ಮಾಡಿಕೊಳ್ಳುವುದು ಸುಲಭವಾದ ವಿಚಾರವಲ್ಲ. ಸಾಹಿತ್ಯವನ್ನು ಪ್ರೋತ್ಸಾಹಿಸಲು ಸಾರ್ವಜನಿಕರಿಂದ ಸಂಗ್ರಹಿಸಿದ ಹಣ ಯಾವ ರೀತಿಯಿಂದಲೂ ಬೇರೆ ಸಾರ್ವಜನಿಕ ಉಪಯುಕ್ತತೆಗಳಿಗೆ ಸಾರ್ವಜನಿಕ ನಿಧಿಯಿಂದ ಸಂಗ್ರಹಿಸಿದ ಹಣಕ್ಕಿಂತಲೂ ಭಿನ್ನವಾಗಿಲ್ಲ. ನಾವು ಆರೋಗ್ಯಕರವೆಂದು ಪರಿಗಣಿಸಿದ ಸ್ಥಳದಲ್ಲಿ ಕ್ಷಯರೋಗದ ಆಸ್ಪತ್ರೆಯೊಂದನ್ನು ಸ್ಥಾಪಿಸುತ್ತೇವೆ. ಆದರೆ ಅದರಿಂದ ನಿರೀಕ್ಷಿತ ಫಲಿತಾಂಶಗಳು ಬರದಿದ್ದಾಗ ನಾವು ಆಸ್ಪತ್ರೆಯನ್ನು ಅಲ್ಲೇ ಇಡುತ್ತೇವೆಂದು ಪ್ರತಿಜ್ಞೆ ಮಾಡಲಾಗುವುದೆ? ಅದೇ ರೀತಿ ನಾವು ಅಲೆತಡೆಯೊಂದನ್ನು ಕಟ್ಟಲು ಪ್ರಾರಂಭಿಸುತ್ತೇವೆ. ಆನಂತರದಲ್ಲಿ ನಮಗೆ ಆ ಅದು ಬಳಕೆಗೆ ಯೋಗ್ಯವಲ್ಲವೆಂದು ಕಂಡುಬಂದು ಅದರ ಕೆಲಸವನ್ನು ನಿಲ್ಲಿಸಿದರೆ ಅದು ಸಾರ್ವಜನಿಕ ವಿಶ್ವಾಸದ ಉಲ್ಲಂಘನೆಯಾಗುವುದೆ? ಆಸ್ತಿಯ ಹಕ್ಕುಗಳು ನಿಸ್ಸಂದೇಹವಾಗಿ ಪವಿತ್ರವಾದುವುಗಳು. ಆದರೆ ಆಚರಣೆಯಷ್ಟು ಬೇರೆ ಯಾವುದೂ ಆ ಹಕ್ಕುಗಳನ್ನು ಅಪಾಯಕ್ಕೀಡು ಮಾಡುವುದಿಲ್ಲ. ಆದರೆ ಅವುಗಳ ಕಾರಣಗಳನ್ನು ಸಂಬಂಧವೇ ಇಲ್ಲದ ವಿಷಯಗಳಿಗೆ ಆರೋಪಿಸುವ ಅಭ್ಯಾಸ ಇದೀಗ ದುರದೃಷ್ಟವಶಾತ್ ತೀರ ಸಾಮಾನ್ಯವಾಗಿ ಕಂಡುಬರುತ್ತಿದೆ. ಆಸ್ತಿಯ ಪಾವಿತ್ರ್ಯವನ್ನು ದುರುಪಯೋಗ ಮಾಡುವವರು ನೈಜವಾಗಿ ಆಸ್ತಿಯೆಂಬ ಸಂಸ್ಥೆಯನ್ನೇ ಕಲುಷಿತಗೊಳಿಸಿ ದುರ್ಬಳಕೆಯಿಂದ ಅದನ್ನು ದುರ್ಬಲಗೊಳಿಸುತ್ತಾರೆ. ಯಾವುದೇ ಒಬ್ಬ ವ್ಯಕ್ತಿಗೆ ಸರ್ಕಾರವೇನಾದರೂ ಒಂದು ವಿಧ್ಯುಕ್ತವಾದ ಆಶ್ವಾಸನೆ ನೀಡಿದ್ದ ಪಕ್ಷದಲ್ಲಿ, ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಸರ್ಕಾರವೇನಾದರೂ ಒಂದು ಸಕಾರಣವಾದ ನಿರೀಕ್ಷೆಯನ್ನು ಹುಟ್ಟಿಸಿದ್ದರೆ, ಅವನು ಸಂಸ್ಕೃತ ಅಥವಾ ಅರಬ್ಬೀ ಭಾಷೆಯ ಕಲಿಕೆಯಿಂದಲೋ ಅಥವಾ ಬೋಧನೆಯಿಂದಲೋ ಒಂದು ನಿರ್ದಿಷ್ಟ ವರಮಾನವನ್ನು ಗಳಿಸಬಹುದೆಂಬ ಅಪೇಕ್ಷೆಯನ್ನು ಹೊಂದಿದ್ದರೆ ನಾನು ಆ ವ್ಯಕ್ತಿಯ ಹಣಕಾಸಿನ ಹಿತಾಸಕ್ತಿಗಳನ್ನು ಗೌರವಿಸುತ್ತೇನೆ. ನಾನು ವ್ಯಕ್ತಿಗಳನ್ನು ಕುರಿತ ಔದಾರ್ಯಕ್ಕೆ ಸಾರ್ವಜನಿಕ ವಿಶ್ವಾಸಕ್ಕಿಂತ ಹೆಚ್ಚಿನ ಆದ್ಯತೆಯನ್ನು ನೀಡುತ್ತೇನೆ. ಆದರೆ ಸರ್ಕಾರವು ಕೆಲವೊಂದು ಭಾಷೆಗಳನ್ನು ಉಪಯೋಗವಿಲ್ಲದಿದ್ದರೂ ಹಾಗೂ ಕೆಲವೊಂದು ವಿಜ್ಞಾನಗಳನ್ನು ಖಂಡನೀಯವಾಗಿದ್ದರೂ ಸಹ ಕಲಿಸಬೇಕೆಂದು ಪಣತೊಟ್ಟರೆ ನನಗೆ ಅದರಲ್ಲಿ ಯಾವ ಅರ್ಥವು ಕಾಣಿಸುವುದಿಲ್ಲ. ಯಾವುದೇ ಸಾರ್ವಜನಿಕ ದಾಖಲೆಗಳಲ್ಲಿ ಇದರ ಬಗ್ಗೆ

ಒಂದು ಪದವೂ ಕಾಣಿಸುವುದಿಲ್ಲ. ಇದರಿಂದ ಭಾರತ ಸರ್ಕಾರವು ಇಂತಹ ವಿಷಯಗಳಿಗೆ ಸಂಬಂಧಿಸಿದಂತೆ ಯಾವುದೇ ರೀತಿ ಪ್ರತಿಜ್ಞೆಗಳನ್ನೂ ಮಾಡಿಲ್ಲವೆಂದು ಊಹಿಸಬಹುದು. ಆದ್ದರಿಂದ ಇಂತಹ ನಿಧಿಗಳ ಅಂತಿಮ ಗುರಿಯೇನೆಂಬುದನ್ನು ಸರ್ಕಾರವು ನಿಶ್ಚಿತವಾಗಿ ನಿಗದಿಪಡಿಸುವುದಿಲ್ಲ. ಆದರೆ ಅದು ಬೇರೆಯ ರೀತಿಯಲ್ಲಿದ್ದಿದ್ದರೆ, ನಮ್ಮ ಆ ವಿಷಯದ ಕುರಿತಾದ ಯಾವುದೇ ಸಂಕಲ್ಪಗಳಿಗೆ ಕಟ್ಟಿಹಾಕುವಂತಹ ನಮ್ಮ ಪೂರ್ವಜರ ಸಾಮರ್ಥ್ಯವನ್ನು ನಾನು ವಿರೋಧಿಸಿರುತ್ತಿದ್ದೆ. ಕಳೆದ ಶತಮಾನದ ಸರ್ಕಾರವೊಂದು ತನ್ನೆಲ್ಲ ಪ್ರಜೆಗಳು ಕೊನೆಯವರೆಗೂ ಸಿಡುಬುರೋಗಕ್ಕೆ ಲಸಿಕೆ ಹಾಕಿಸಿಕೊಳ್ಳಬೇಕೆಂಬ ಕಾಯಿದೆಯನ್ನು ಅತಿ ಕಾಳಜಿಯಿಂದ ಜಾರಿಗೊಳಿಸಿತೆಂದು ಭಾವಿಸೋಣ. ಈ ಅಭ್ಯಾಸವನ್ನು ಜೆನ್ನರ್ ಅವರ ಸಂಶೋಧನೆಯ ಅನಂತರವೂ ಮುಂದುವರಿಸಿಕೊಂಡು ಹೋಗಲು ಆ ಸರ್ಕಾರಕ್ಕೆ ಸಾಧ್ಯವಿತ್ತೇ? ಈ ಭರವಸೆಗಳಿಗನುಗುಣವಾಗಿ ಯಾರೂ ಕಾರ್ಯ ನಿರ್ವಹಿಸುವುದಿಲ್ಲ, ಇದರಿಂದಾಗಿ ಯಾರಿಗೂ ಸಹ ಬಿಡುಗಡೆಯನ್ನು ನೀಡಲಾಗುವುದಿಲ್ಲ, ಈ ಪಟ್ಟಭದ್ರ ಹಕ್ಕುಗಳು ಯಾರಲ್ಲಿಯೂ ನೆಲೆಸಿಲ್ಲ, ಒಡೆಯರೇ ಇಲ್ಲದ ಈ ಆಸ್ತಿಗಳು ಮತ್ತು ಈ ರೀತಿಯ ದರೋಡೆ ಯಾರನ್ನೂ ಬಡವರನ್ನಾಗಿಸುವುದಿಲ್ಲ. ನನಗಿಂತಲೂ ಉನ್ನತಮಟ್ಟದ ಧೀಶಕ್ತಿ (ಬುದ್ಧಿಶಕ್ತಿ) ಹೊಂದಿರುವ ವ್ಯಕ್ತಿಗಳು ಇದನ್ನು ಗ್ರಹಿಸಬಹುದು. ಭಾರತ ಹಾಗೂ ಇಂಗ್ಲೆಂಡ್ ದೇಶಗಳೆರಡರಲ್ಲೂ ಎಲ್ಲಾ ರೀತಿಯ ದುರ್ಬಳಕೆಗಳ ರಕ್ಷಣೆಗಾಗಿ ಈ ಪದಪುಂಜಗಳ ನೆಪವನ್ನು ಬಳಸಲಾಗುತ್ತದೆಂದು ನಾನು ಪರಿಗಣಿಸುತ್ತೇನೆ. ಈ ದುರ್ಬಳಕೆಗಳ ರಕ್ಷಣೆಗಾಗಿ ಬೇರೆ ಯಾವ ನೆಪವನ್ನು ಕೊಡಲಾಗುವುದಿಲ್ಲ.

6. ಈ ಲಕ್ಷ ರೂಪಾಯಿಗಳು ಕೌನ್ಸಿಲ್‌ನಲ್ಲಿ ಗೌರ್ನರ್ ಜನರಲ್‌ರವರ ವಶದಲ್ಲಿದ್ದು, ಭಾರತದಲ್ಲಿ ಕಲಿಕೆಯನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ ಅದನ್ನು ಸಮರ್ಪಕವಾಗಿ ಮತ್ತು ಯೋಜಿತವಾಗಿ ಬಳಸಬಹುದು. ಇನ್ನು ಮುಂದೆ ಸಂಸ್ಕೃತ ಮತ್ತು ಅರಬ್ಬಿ ಭಾಷೆಗಳ ಉತ್ತೇಜನಕ್ಕಾಗಿ, ಆ ಹಣವನ್ನು ಬಳಸಲಾಗುವುದಿಲ್ಲ. ಮೈಸೂರಿನಲ್ಲಿ ಹುಲಿಗಳನ್ನು ಕೊಲ್ಲಲು ಬಹುಮಾನ ಮೊತ್ತವನ್ನು ತಗ್ಗಿಸಲು ಅಥವಾ ಚರ್ಚ್‌ಗಳ ಮುಂದೆ ಜಪ ಮಾಡುವುದಕ್ಕಾಗಿ ಸಾರ್ವಜನಿಕ ಹಣವನ್ನು ನೀಡದೆ ಇರುವ ನಿರ್ದೇಶನವನ್ನು ನೀಡಲು ಗೌರವಾನ್ವಿತ ಗರ್ವರ್ ಜನರಲ್‌ರವರು ಮುಕ್ತರಾಗಿದ್ದಾರೆಂದು ನಾನು ಭಾವಿಸುತ್ತೇನೆ.

7. ನಾವೀಗ ಈ ವಿಚಾರದ ಮುಖ್ಯಾಂಶಕ್ಕೆ ಬರುತ್ತಿದ್ದೇವೆ. ಈ ದೇಶದ ಜನರ ಬೌದ್ಧಿಕ ಬೆಳವಣಿಗೆಗಾಗಿ ಸರ್ಕಾರವು ನಮ್ಮಲ್ಲಿರುವ ಈ ನಿಧಿಯನ್ನು ನಿರ್ದೇಶಿಸಬಹುದು. ಸರಳ ಪ್ರಶ್ನೆಯೆಂದರೆ ಯಾವುದು ಈ ಹಣವನ್ನು ವಿನಿಯೋಗಿಸುವ ಅತ್ಯಂತ ಪ್ರಯೋಜನಕಾರಿಯಾದ ಮಾರ್ಗ?

8. ಎಲ್ಲರೂ ಒಂದು ವಿಷಯವನ್ನು ಒಪ್ಪಿಕೊಳ್ಳುತ್ತಾರೆಂದು ಕಂಡುಬರುತ್ತದೆ. ಭಾರತದ ಈ ಭಾಗದಲ್ಲಿರುವ ನಿವಾಸಿಗಳು

ಸಾಮಾನ್ಯವಾಗಿ ಮಾತನಾಡುವ ಉಪಭಾಷೆಗಳು ಸಾಹಿತ್ಯ ಅಥವಾ ವಿಜ್ಞಾನದ ಮಾಹಿತಿಗಳನ್ನು ಒಳಗೊಂಡಿರುವುದಿಲ್ಲ. ಈ ಉಪಭಾಷೆಗಳು ಅತ್ಯಂತ ನಿಕೃಷ್ಟ ಮತ್ತು ಅನಾಗರಿಕ ಸ್ಥಿತಿಯಲ್ಲಿದ್ದು, ಅವುಗಳನ್ನು ಇನ್ನೊಂದು ಆಕರದಿಂದ ಶ್ರೀಮಂತಗೊಳಿಸುವವರೆಗೂ ಆ ಭಾಷೆಗಳಿಗೆ ಯಾವುದೇ ಮೌಲಿಕ ಕೃತಿಗಳನ್ನು ಅನುವಾದ ಮಾಡುವುದು ಅಷ್ಟು ಸುಲಭವಲ್ಲ. ಎಲ್ಲರೂ ಒಪ್ಪಿದಂತೆ ಕಾಣುವುದೇನೆಂದರೆ ಈ ವರ್ಗಗಳು ಉನ್ನತ ಶಿಕ್ಷಣಕ್ಕೆ ಬೇಕಾದ ಸಾಧನಗಳನ್ನು ಹೊಂದಿದ್ದರೂ ಸಹ ಅವರ ಬೌದ್ಧಿಕ ಬೆಳವಣಿಗೆಯ ಮೇಲೆ ಪ್ರಸ್ತುತದಲ್ಲಿ ಪ್ರಭಾವ ಬೀರುತ್ತಿರುವುದು ಕೆಲವೊಂದು ಭಾಷೆಗಳೇ ಹೊರತು ಅವರು ಬಳಸುತ್ತಿರುವ ಆಡುನುಡಿಗಳಲ್ಲ.

9. ಅಂದರೆ ಆ ಭಾಷೆಯು ಯಾವುದಾಗಿರಬೇಕು? ಸಮಿತಿಯ ಅರ್ಧ ಭಾಗದಷ್ಟು ಜನ ಅದು ಇಂಗ್ಲಿಷೆಂದು ಹೇಳುತ್ತಾರೆ. ಇನ್ನುಳಿದರ್ಧ ಮಂದಿ ಅದು ಸಂಸ್ಕೃತ ಅಥವಾ ಅರಬ್ಬೀ ಭಾಷೆಯೆಂದು ಶಿಫಾರಸ್ಸು ಮಾಡುತ್ತಾರೆ. ಈ ಇಡೀ ಪ್ರಶ್ನೆ ನನಗೆ ಕಂಡುಬರುವಂತೆ-ಯಾವ ಭಾಷೆಯನ್ನು ತಿಳಿದುಕೊಳ್ಳುವುದು ಅತ್ಯಂತ ಪ್ರಯೋಜನಕಾರಿ?

10. ನನಗೆ ಸಂಸ್ಕೃತ ಅಥವಾ ಅರಬ್ಬಿ ಭಾಷೆಯ ಜ್ಞಾನ ಸ್ವಲ್ಪವೂ ಇಲ್ಲ. ಆದರೆ ಅವುಗಳ ಸರಿಯಾದ ಮೌಲ್ಯವನ್ನು ಅಂದಾಜು ಮಾಡಲು ನನ್ನ ಕೈಲಾದ ಮಟ್ಟಿಗೆ ಪ್ರಯತ್ನಿಸಿದ್ದೇನೆ. ಅರಬ್ಬಿ ಮತ್ತು ಸಂಸ್ಕೃತ ಭಾಷೆಗಳ ಪ್ರಖ್ಯಾತ ಗ್ರಂಥಗಳ ಅನುವಾದಗಳನ್ನು ನಾನು ಓದಿದ್ದೇನೆ. ನಾನು ಇಲ್ಲಿ ಹಾಗೂ ನನ್ನ ದೇಶದಲ್ಲಿ ಪೂರ್ವದ ಭಾಷೆಗಳ ಪರಿಣಿತರೊಡನೆ ಚರ್ಚಿಸಿದ್ದೇನೆ. ನಾನು ಪೌರಸ್ತ್ಯ ಕಲಿಕೆಯನ್ನು ಪೌರಸ್ತ್ಯರಿಂದಲೇ ಕಲಿತುಕೊಳ್ಳಲು ಸಿದ್ಧನಾಗಿದ್ದೇನೆ. ಒಂದು ಉತ್ತಮ ಯುರೋಪಿಯನ್ನರ ಗ್ರಂಥಾಲಯದ ಒಂದು ಬೀರುವಿಗೆ ಸಮನಾದ ಸ್ಥಳೀಯ ಸಾಹಿತ್ಯವಿರುವ ಗ್ರಂಥಾಲಯವೊಂದು ಭಾರತ ಅಥವಾ ಅರೇಬಿಯದಲ್ಲಿದೆಯೆಂದು ಹೇಳುವ ಒಬ್ಬ ವ್ಯಕ್ತಿಯನ್ನೂ ನಾನು ಇದುವರೆಗೆ ಕಂಡಿಲ್ಲ. ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಅಂತರ್ಗತವಾಗಿರುವ ಶ್ರೇಷ್ಠತೆಯನ್ನು ಸಮಿತಿಯಲ್ಲಿನ ಪೌರಸ್ತ್ಯ ಶಿಕ್ಷಣ ಯೋಜನೆಯನ್ನು ಬೆಂಬಲಿಸುವವರು ಸಹ ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತಾರೆ.

11. ಸಾಹಿತ್ಯದ ವಿಭಾಗವಾದ ಪದ್ಯಗಳನ್ನು ರಚಿಸುವುದರಲ್ಲಿ ಪೌರಸ್ತ್ಯ ಲೇಖಕರು ಅತ್ಯುನ್ನತ ಮಟ್ಟದಲ್ಲಿದ್ದಾರೆಂಬುದು ವಿವಾದಾಸ್ಪದವಾದ ವಿಷಯವೆಂದು ನನಗನ್ನಿಸುವುದಿಲ್ಲ. ಅರೇಬಿಕ್ ಮತ್ತು ಸಂಸ್ಕೃತ ಪದ್ಯವನ್ನು ಯುರೋಪಿನ ಮಹಾನ್ ರಾಷ್ಟ್ರಗಳ ಪದ್ಯಗಳೊಂದಿಗೆ ಹೋಲಿಸಬಹುದೆಂದು ಹೇಳುವ ಪೌರಾತ್ಯವಾದಿಯನ್ನು ನಾನೆಂದಿಗೂ ಭೇಟಿ ಮಾಡಿಲ್ಲ. ಆದರೆ ನಾವು ಕಾಲ್ಪನಿಕ ಕಾರ್ಯಗಳಿಂದ, ಮಾಹಿತಿಗಳ ದಾಖಲೆ ಮತ್ತು ಸಂಶೋಧಿಸಲ್ಪಟ್ಟ ಸಾರ್ವತ್ರಿಕ ತತ್ತ್ವಗಳ ಕಾರ್ಯವನ್ನು ನೋಡಿದಾಗ ಯುರೋಪಿನವರ ಶ್ರೇಷ್ಠತೆಯನ್ನು ಅಳತೆ

ಮಾಡಲಾಗುವುದಿಲ್ಲ. ಸಂಸ್ಕೃತ ಭಾಷೆಯ ಬರೆದಿಡಲಾದ ಎಲ್ಲ ಪುಸ್ತಕಗಳ ಸಂಗ್ರಹಿತ ಐತಿಹಾಸಿಕ ಮಾಹಿತಿಗಳು ಇಂಗ್ಲೆಂಡಿನ ಪ್ರಾರಂಭಿಕ ಹಂತದ ಶಾಲೆಗಳಲ್ಲಿ ಉಪಯೋಗಿಸುವ ಸಂಗ್ರಹಿತ ಕ್ಷುಲ್ಲಕ ಸಂಕ್ಷಿಪ್ತ ರೂಪಗಳಿಗಿಂತಲೂ ಕಡಮೆ ಮೌಲ್ಯದ್ದೆಂದು ನಾನು ನಂಬುತ್ತೇನೆ ಮತ್ತು ಹಾಗೆ ಹೇಳಿದರೆ ಅದು ಉತ್ಪ್ರೇಕ್ಷೆಯಾಗುವುದಿಲ್ಲವೆಂದು ನಾನು ಹೇಳುತ್ತೇನೆ. ಭೌತಿಕ ಮತ್ತು ನೈತಿಕ ದರ್ಶನಗಳ ಪ್ರತಿಯೊಂದು ಶಾಖೆಗಳಲ್ಲಿ ಎರಡು ರಾಷ್ಟ್ರಗಳ ಸಾಪೇಕ್ಷ ಸ್ಥಾನಗಳು ಹೆಚ್ಚು ಕಡಮೆ ಒಂದೇ ಆಗಿದೆ.

12. ಹಾಗಿದ್ದರೆ ಈ ವಿದ್ಯಮಾನ ಎಲ್ಲಿಗೆ ಬಂದು ನಿಲ್ಲುತ್ತದೆ? ತಮ್ಮ ಸ್ವಂತ ಮಾತೃಭಾಷೆಯ ಮಾಧ್ಯಮದಲ್ಲಿ ಶಿಕ್ಷಣ ಪಡೆಯಲಾಗದ ಜನರಿಗೆ ನಾವೀಗ ಶಿಕ್ಷಣ ನೀಡಬೇಕಾಗಿದೆ. ನಾವು ಅವರಿಗೆ ವಿದೇಶಿ ಭಾಷೆಯೊಂದನ್ನು ಕಲಿಸಬೇಕಾಗಿದೆ. ನಮ್ಮ ಭಾಷೆಯ ಬಗೆಗಿನ ಶ್ರೇಷ್ಠತೆಯನ್ನು ಪುನರುಚ್ಚರಿಸುವ ಅಗತ್ಯವಿಲ್ಲ. ಪಶ್ಚಿಮದ ಇತರ ಭಾಷೆಗಳಿಗೆ ಹೋಲಿಸಿದಾಗಲೂ ಸಹ ಅದು ಅತ್ಯುತ್ತಮ ಸ್ಥಾನದಲ್ಲಿ ನಿಲ್ಲುತ್ತದೆ. ಅದರಲ್ಲಿ ಕಲ್ಪನಾಶಕ್ತಿಗೆ ಸಂಬಂಧಿಸಿದ ಕಾರ್ಯಗಳು ಯಥೇಚ್ಛವಾಗಿದೆ. ಅದು ಗ್ರೀಕರು  ಮುಂದಿನ ಪೀಳಿಗೆಗೆ ಬಿಟ್ಟಿರುವ ಅಮೋಘ ಕೃತಿಗಳಿಗಿಂತ ಯಾವ ರೀತಿಯಿಂದಲೂ ಕಡಮೆಯಲ್ಲ. ಎಲ್ಲ ಬಗೆಯ ವಾಕ್‌ಚಾತುರ್ಯದ ಮಾದರಿಗಳು, ಅದರಲ್ಲಿದೆ- ಆಖ್ಯಾನಗಳೆಂದು ಪರಿಗಣಿಸಬಹುದಾದ ಐತಿಹಾಸಿಕ ರಚನೆಗಳು ಅದರಲ್ಲಿದೆ. ಅವುಗಳನ್ನೆಂದಿಗೂ ಮೀರಿಸಲಾಗುವುದಿಲ್ಲ. ರಾಜಕೀಯ-ನೈತಿಕ ಶಿಕ್ಷಣಕ್ಕೆ ಅದನ್ನು ವಾಹಕವೆಂದು ಪರಿಗಣಿಸಬಹುದು. ಇದರಲ್ಲಿ ಅದನ್ನೆಂದಿಗೂ ಸರಿಗಟ್ಟಲಾಗುವುದಿಲ್ಲ. ಮನುಷ್ಯ ಜೀವನ ಹಾಗೂ ಮನುಷ್ಯ ಸ್ವಭಾವದ ನ್ಯಾಯಯುತವಾದ ಜೀವಂತ ಪ್ರತಿನಿಧಿತ್ವವನ್ನು ಅದರಲ್ಲಿ ಕಾಣಬಹುದು. ಪ್ರಗಾಢವಾದ ತತ್ವಗಳು, ನೀತಿಗಳು, ಸರ್ಕಾರ, ನ್ಯಾಯಶಾಸ್ತ್ರ, ವ್ಯಾಪಾರ ಇವುಗಳೆಲ್ಲವನ್ನೂ ಈ ಭಾಷೆಯಲ್ಲಿ ನಿರ್ವಹಿಸಬಹುದು. ಪ್ರತಿಯೊಂದು ಪ್ರಯೋಗಾತ್ಮಕ ವಿಜ್ಞಾನಕ್ಕೂ ಸಂಬಂಧಿಸದಂತೆ ಗೌರವಿಸುವ ಸರಿಯಾದ ಸಂಪೂರ್ಣ ಮಾಹಿತಿಯನ್ನು ಈ ಭಾಷೆಯಲ್ಲಿ ಪಡೆಯಬಹುದು. ಇದರಿಂದಾಗಿ ಮನುಷ್ಯನ ಆರೋಗ್ಯವನ್ನು ಕಾಪಾಡಬಹುದು, ಅವನ ಸೌಲಭ್ಯಗಳನ್ನು ಹೆಚ್ಚಿಸಿ ಬುದ್ಧಿಶಕ್ತಿಯನ್ನು ವಿಸ್ತರಿಸಬಹುದು. ಸುಮಾರು ತೊಂಬತ್ತು ತಲೆಮಾರುಗಳ ಕಾಲಾವಧಿಯಲ್ಲಿ ಭೂಮಿಯಲ್ಲಿರುವ ಎಲ್ಲ ಶ್ರೇಷ್ಠ ವಿವೇಕದ ರಾಷ್ಟ್ರಗಳು ಸೃಷ್ಟಿಸಿರುವ ಮತ್ತು ಸಂಗ್ರಹಿಸಿರುವ ಬೌದ್ಧಿಕ ಸಂಪತ್ತು ಈ ಭಾಷೆಯಲ್ಲಿರುವುದೆಂದು ಪ್ರತಿಯೊಬ್ಬರಿಗೂ ತಿಳಿದಿದೆ. ಆ ಭಾಷೆಯಲ್ಲಿ ಈಗಿರುವ ಸಾಹಿತ್ಯದ ವಿಸ್ತಾರ ಪ್ರಪಂಚದ ಇತರ ಎಲ್ಲಾ ಭಾಷೆಗಳಲ್ಲಿ ಸುಮಾರು ೩೦೦ ವರ್ಷಗಳಿಂದ ಒಟ್ಟಾರೆ ಇರುವ ಸಾಹಿತ್ಯದ ಮೌಲ್ಯಕ್ಕಿಂತ ಹೆಚ್ಚೆಂದು ನಿಶ್ಚಿತವಾಗಿ ಹೇಳಬಹುದು. ಇದಿಷ್ಟೇ ಅಲ್ಲ. ಭಾರತದಲ್ಲಿ ಇಂಗ್ಲಿಷ್ ಆಳುವ ವರ್ಗದ ಮಾತನಾಡುವ ಭಾಷೆಯಾಗಿದೆ.

ಸರ್ಕಾರಿ ಅಧಿಕಾರ ಸ್ಥಾನಗಳಲ್ಲಿರುವ ಸ್ಥಳೀಯ ಉನ್ನತ ವರ್ಗದ ಮಾತನಾಡುವ ಭಾಷೆಯು ಸಹ ಇಂಗ್ಲಿಷ್ ಆಗಿದೆ. ಪೂರ್ವ ಸಮುದ್ರಗಳ ಎಲ್ಲೆಡೆ ಈ ಭಾಷೆಯು ವಾಣಿಜ್ಯ ಭಾಷೆಯಾಗುವ ಸಂಭವವಿದೆ. ಇದು ಎರಡು ಉದಯೋನ್ಮುಖ ಮಹಾನ್ ಯುರೋಪಿಯನ್ ಸಮುದಾಯಗಳ ಭಾಷೆಯೂ ಆಗಿದೆ. ಒಂದು ಆಫ್ರಿಕಾ ಖಂಡದ ದಕ್ಷಿಣಕ್ಕೆ ಮತ್ತು ಇನ್ನೊಂದು ಆಸ್ಟ್ರೇಲಿಯಾದಲ್ಲಿ ನೆಲೆಸಿವೆ. ಈ ಸಮುದಾಯಗಳು ಪ್ರತಿವರ್ಷವೂ ಹೆಚ್ಚು ಹೆಚ್ಚು ಮಹತ್ತ್ವ ಪಡೆಯುತ್ತಿದ್ದು ನಮ್ಮ ಭಾರತೀಯ ಸಾಮ್ರಾಜ್ಯದೊಡನೆ ಹತ್ತಿರದ ಸಂಪರ್ಕವನ್ನು ಹೊಂದುತ್ತಿವೆ. ನಾವು ನಮ್ಮ ಸಾಹಿತ್ಯದ ಆಂತರಿಕ ಮೌಲ್ಯವನ್ನು ನೋಡುವುದರಿಂದಾಗಲೀ ಅಥವಾ ಈ ದೇಶದ ವಿಶಿಷ್ಟ ಪರಿಸ್ಥಿತಿಯನ್ನು ನೋಡುವುದಕ್ಕಾಗಲೀ ಎಲ್ಲಾ ವಿದೇಶಿ ಭಾಷೆಗಳಿಗಿಂತ ಇಂಗ್ಲೀಷ್ ಭಾಷೆಯು ನಮ್ಮ ಸ್ಥಳೀಯ ಪ್ರಜೆಗಳಿಗೆ ಅತ್ಯಂತ ಉಪಯುಕ್ತವಾದುದೆಂದು ಹೇಳಲು ಬಲವಾದ ಕಾರಣಗಳಿವೆ.

13. ನಮ್ಮ ಮುಂದೆ ಈಗಿರುವ ಸರಳ ಪ್ರಶ್ನೆಯೆಂದರೆ ಈ ಇಂಗ್ಲಿಷ್ ಭಾಷೆಯನ್ನು ಕಲಿಸುವ ಶಕ್ತಿ ನಮ್ಮಲ್ಲಿರುವಾಗ ನಾವು ಅದನ್ನು ಕಲಿಸಬೇಕಾಗುತ್ತದೆ. ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ನಮ್ಮಲ್ಲಿರುವ ಪುಸ್ತಕಗಳೊಂದಿಗೆ ಬೇರೆ ಪುಸ್ತಕಗಳನ್ನು ಹೋಲಿಸಲಾಗುವುದಿಲ್ಲ. ಯುರೋಪಿನ ವಿಜ್ಞಾನವನ್ನು ಕಲಿಸುವುದಕ್ಕಾಗಲೀ ಅಥವಾ ಇನ್ನಿತರ ಕಲಿಕೆ ಪ್ರಕಾರಗಳ ಜ್ಞಾನಕ್ಕಾಗಲೀ ಇಂಗ್ಲಿಷ್ ಪ್ರಮುಖವಾಗುತ್ತದೆ. ಕಲಿಕೆಯ ಪ್ರಕಾರಗಳು ಯುರೋಪಿನ ಕಲಿಕೆ ಪ್ರಕಾರದ ಬಗ್ಗೆ ವ್ಯತ್ಯಾಸವನ್ನು ಹೊಂದಿದ್ದ ಪಕ್ಷದಲ್ಲಿ ಯುರೋಪಿಯನ್ ಜ್ಞಾನವೇ ಉತ್ತಮವಾಗಿರುತ್ತದೆ. ನಾವು ಸರಿಯಾದ ತತ್ತ್ವಶಾಸ್ತ್ರ ಮತ್ತು ನಿಜವಾದ ಇತಿಹಾಸವನ್ನು ಪೋಷಿಸುತ್ತಿರುವಾಗ ಸಾರ್ವಜನಿಕ ಹಣವನ್ನು ಅಸಮರ್ಪಕ ಜ್ಞಾನವನ್ನು ನೀಡಲು ವಿನಿಯೋಗಿಸಬಹುದೆ? ಇಂಗ್ಲೆಂಡಿನಲ್ಲಿ ಕುದುರೆಗೆ ಲಾಳ ಹೊಡೆಯುವವನು ಸಹ ನಾಚುವಂತಹ ವೈದ್ಯ ಸಿದ್ಧಾಂತವನ್ನು ಬೋಧಿಸಬಹುದೆ? ಇಂಗ್ಲೆಂಡಿನ ವಸತಿ ಶಾಲೆಗಳಲ್ಲಿ ಅಧ್ಯಯನ ಮಾಡುತ್ತಿರುವ ಹುಡುಗಿಯರನ್ನು ಸಹ ನಗೆಗೀಡು ಮಾಡುವಂತಹ ಖಗೋಳ ಶಾಸ್ತ್ರವನ್ನು ಕಲಿಸಬಹುದೆ? ಮೂವತ್ತು ಸಹಸ್ರವರ್ಷ ಆಳ್ವಿಕೆ ನಡೆಸುವ ಮೂವತ್ತು ಅಡಿ ಉದ್ದವಿದ್ದ ರಾಜರ ಚರಿತ್ರೆಯನ್ನು ಮತ್ತು ಬೆಣ್ಣೆ ಹಾಗೂ ಸಕ್ಕರೆ ಪಾಕದ ಸಮುದ್ರಗಳ ಬಗ್ಗೆ ಹೇಳುವ ಭೂಗೋಳ ಪಾಠಗಳನ್ನು ಕಲಿಸಬೇಕೆ? ಸಾರ್ವಜನಿಕ ಹಣ ಇಂತಹ ವಿದ್ಯಾಭ್ಯಾಸಕ್ಕೆ ವ್ಯಯಿಸುವುದು ಎಷ್ಟು ಸಮಂಜಸ?

14. ನಮ್ಮನ್ನು ನಾವು ಮುನ್ನಡೆಸಿಕೊಳ್ಳಲು ನಮಗೆ ಅನುಭವದ ಕೊರತೆಯಿಲ್ಲ. ಇತಿಹಾಸವು ನಮಗೆ ಇಂತಹುದೇ ಆದ ಹಲವಾರು ನಿದರ್ಶನಗಳ ಮೂಲಕ ಅದೇ ಪಾಠವನ್ನು ಕಲಿಸಿದೆ. ಆಧುನಿಕ

ಕಾಲದಲ್ಲೂ ಅಂತಹ ಉದಾಹರಣೆಗಳು ಕಾಣಸಿಗುತ್ತವೆ. ಇಡೀ ಸಾಮಾಜಿಕ ಮನಸ್ಸಿಗೆ ಎರಡು ಸ್ಮರಣೀಯ ನಿದರ್ಶನಗಳು, ಒಂದು ಮಹಾನ್ ಮುನ್ನಡೆಯನ್ನು ಕೊಟ್ಟಿವೆ. ಪೂರ್ವಗ್ರಹಗಳನ್ನು ಕಿತ್ತೊಗೆದು, ಜ್ಞಾನವನ್ನು ಹರಡುವ ಮತ್ತು ಅಭಿರುಚಿಯನ್ನು ಹಾಗೂ ಕಲೆಯನ್ನು ಶುದ್ಧಗೊಳಿಸುವ ಮತ್ತು ವಿವಿಧ ದೇಶಗಳಲ್ಲಿ ವಿಜ್ಞಾನಗಳನ್ನು ಬಿತ್ತುವ ಪ್ರವೃತ್ತಿ ಬೆಳೆಯುತ್ತಿದೆ. ಈ ದೇಶಗಳು ಇತ್ತೀಚಿನವರೆಗೂ ಅತ್ಯಂತ ಬರ್ಬರವಾದ ಅಜ್ಞಾನಿಗಳ ದೇಶಗಳಾಗಿದ್ದವು.

15. ನಾನು ಇಲ್ಲಿ ಉಲ್ಲೇಖಿಸುತ್ತಿರುವ ಮೊದಲ ನಿದರ್ಶನವೆಂದರೆ, ಪಾಶ್ಚಿಮಾತ್ಯ ದೇಶಗಳಲ್ಲಿ ಸುಮಾರು ಹದಿನೈದನೆಯ ಶತಮಾನದ ಅಂತ್ಯದಿಂದ ಮತ್ತು ಹದಿನಾರನೆಯ ಶತಮಾನದ ಪ್ರಾರಂಭದ ಅವಧಿಯಲ್ಲಿ ನಡೆದ ಲಿಪಿಗಳ ಮಹಾನ್ ಪುನರುಜ್ಜೀವನ. ಆ ಸಮಯದಲ್ಲಿ ಮೌಲ್ಯಯುತವಾದ ಹಾಗೂ ಓದಬಹುದಾದ ಪ್ರತಿಯೊಂದು ಸಹ, ಪ್ರಾಚೀನ ಗ್ರೀಕ್ ಹಾಗೂ ರೋಮನ್‌ರ ಬರವಣಿಗೆಗಳಲ್ಲಿ ಅಡಕವಾಗಿತ್ತು. ನಮ್ಮ ಪೂರ್ವಜರೇನಾದರೂ ಇತ್ತೀಚಿನ ನಮ್ಮ ಸಾರ್ವಜನಿಕ ಶಿಕ್ಷಣ ಸಮಿತಿಯಂತೆ ವರ್ತಿಸಿದ್ದರೆ, ಅವರು ಪ್ಲೇಟೋ ಮತ್ತು ಥೂಸಿಡೈಡಸ್ ಭಾಷೆಗಳನ್ನು ಕಡೆಗಣಿಸಿದ್ದರೆ ಮತ್ತು ಸಿಸಿರೊ ಹಾಗೂ ಟಾಸಿಟಸ್ ಭಾಷೆಯನ್ನು ಕಡೆಗಣಿಸಿದ್ದರೆ, ಅವರು ನಮ್ಮ ದ್ವೀಪದ ಉಪಭಾಷೆಗಳಿಗೆ ಮಾತ್ರ ಅವರನ್ನು ಸೀಮಿತಗೊಳಿಸಿಕೊಂಡಿದ್ದರೆ, ಅವರು ತಮ್ಮ ವಿಶ್ವವಿದ್ಯಾಲಯಗಳಲ್ಲಿ ಏನನ್ನು ಮುದ್ರಿಸದೆ ಏನನ್ನು ಕಲಿಸದೆ ಬರೀ ಆಂಗ್ಲೋ-ಸ್ಯಾಕ್ಸನ್ ದಿನಚರಿ ಮತ್ತು ನಾರ್ಮನ್ ಫ್ರೆಂಚ್ ಕಲ್ಪಿತ ಕಥೆಗಳನ್ನು ಮಾತ್ರ ಕಲಿಸಿದ್ದರೆ, ಇಂಗ್ಲೆಂಡ್ ದೇಶ ಈಗಿರುವ ಸ್ಥಿತಿಯಲ್ಲಿರುತ್ತಿತ್ತೇ? ಮೊರ್ ಮತ್ತು ಆಶ್ಯಾಮ್‌ರವರ ಸಮಕಾಲೀನರಿಗೆ ಗ್ರೀಕ್ ಹಾಗೂ ಲ್ಯಾಟಿನ್ ಭಾಷೆಗಳಿದ್ದಂತೆ ನಮ್ಮ ಇಂಗ್ಲೀಷ್ ಭಾಷೆ ಭಾರತದ ಜನರಿಗೆ ಸಹಾಯಕವಾಗುತ್ತದೆ. ಇಂಗ್ಲೆಂಡ್‌ನ ಸಾಹಿತ್ಯ ಇದೀಗ ಅಭಿಜಾತ ಪ್ರಾಚೀನ ಸಾಹಿತ್ಯಕ್ಕಿಂತ ಹೆಚ್ಚು ಮೌಲ್ಯಯುತವಾಗಿದೆ. ಸಂಸ್ಕೃತ ಸಾಹಿತ್ಯವು ನಮ್ಮ ಸಾಕ್ಸನ್ ಮತ್ತು ನಾರ್ಮನ್ ಸಂತತಿಯವರ ಸಾಹಿತ್ಯದಷ್ಟು ಮೌಲ್ಯಯುತವೇ ಎಂಬುದರ ಬಗ್ಗೆ ಸಹ ನನಗೆ ಅನುಮಾನವಿದೆ. ಕೆಲವೊಂದು ವಿಭಾಗಗಳಲ್ಲಿ-ಉದಾಹರಣೆಗೆ ಇತಿಹಾಸದಲ್ಲಿ ಅದು ನಿಶ್ಚಿತವಾಗಿ ಅವುಗಳಿಗಿಂತ ಕೆಳಗಿನ ಮಟ್ಟದಲ್ಲಿದೆ.

16. ನಮ್ಮ ಕಣ್ಣ ಮುಂದಿರುವ ಇನ್ನೊಂದು ನಿದರ್ಶನವನ್ನು ಹೇಳಬಹುದು. ಕಳೆದ ನೂರಿಪ್ಪತ್ತು ವರ್ಷಗಳಲ್ಲಿ ಪವಿತ್ರಯುದ್ಧಗಳಿಗೂ(ಕ್ರುಸೇಡ್‌ಗಳು) ಹಿಂದೆ ಬರ್ಬರ ಸ್ಥಿತಿಯಲ್ಲಿದ್ದ ಒಂದು ದೇಶದಲ್ಲಿ ನಮ್ಮ ಪೂರ್ವಜರು ಕ್ರಮೇಣವಾಗಿ ಅಜ್ಞಾನವನ್ನು ಮೀರಿ ಮೇಲೆ ಬಂದು ನಾಗರೀಕ ಸಮುದಾಯಗಳಲ್ಲಿ ತಮ್ಮ ಸ್ಥಾನವನ್ನು ಪಡೆದುಕೊಂಡರು. ನಾನು ರಷ್ಯಾ ಬಗ್ಗೆ ಮಾತನಾಡುತ್ತಿದ್ದೇನೆ. ಈಗ ಆ ದೇಶದಲ್ಲಿ ವಿಶಾಲವಾದ

ಶಿಕ್ಷಿತ ವರ್ಗವೊಂದಿದ್ದು, ರಾಜ್ಯದ ಉನ್ನತ ಸ್ಥಾನಗಳಲ್ಲಿ ಸೇವೆ ಸಲ್ಲಿಸುವ ಅರ್ಹತೆಯನ್ನು ಹೊಂದಿದ್ದು, ಅವರು ಯಾವ ರೀತಿಯಿಂದಲೂ ಪ್ಯಾರಿಸ್ ಮತ್ತು ಲಂಡನ್‌ನಲ್ಲಿ ಶ್ರೇಷ್ಠ ವಲಯಗಳನ್ನು ಅಲಂಕರಿಸಿರುವ ಅತ್ಯಂತ ಮುಂದುವರಿದ ಸಾಧನೆಗಳನ್ನು ಮಾಡಿರುವ ಜನರಿಗಿಂತ ಕೆಳಮಟ್ಟದವರೆಂದು ಅನ್ನಿಸುವುದಿಲ್ಲ. ಈ ವಿಶಾಲ ಸಾಮ್ರಾಜ್ಯ ನಮ್ಮ ಮುತ್ತಾತಂದಿರ ಕಾಲದಲ್ಲಿ ಬಹುಶಃ ಪಂಜಾಬ್‌ಗಿಂತ ಹಿಂದೆ ಇದ್ದಿರಬಹುದೆಂದು ಹೇಳಲು ಸಾಕಷ್ಟು ಕಾರಣಗಳಿವೆ. ಅದೇ ರೀತಿ ನಮ್ಮ ಮೊಮ್ಮಕ್ಕಳ ಕಾಲದಲ್ಲಿ ಅದು ಫ್ರಾನ್ಸ್ ಮತ್ತು ಬ್ರಿಟನ್‌ನನ್ನು ಸರಿಗಟ್ಟಬಹುದು. ಈ ಬದಲಾವಣೆ ಹೇಗೆ ಬಂದಿದೆ? ಅದು ಬಂದಿರುವುದು ರಾಷ್ಟ್ರೀಯ ಪೂರ್ವಗ್ರಹಗಳನ್ನು ಹೊಗಳುವುದರಿಂದಲ್ಲ. ಒಬ್ಬ ಮಾಸ್ಕೊ ಯುವಕನ ಮನಸ್ಸನ್ನು ಅಡಗೂಲಜ್ಜಿಯ ಕಥೆಗಳಿಂದ ಮರುಳು ಮಾಡುವುದರಿಂದ ಬಂದಿಲ್ಲ, ಅಥವಾ ಸಂತ ನಿಕೋಲಸ್ ಬಗೆಗಿನ ಸುಳ್ಳು ದಂತಕಥೆಗಳನ್ನು ಅವನ ತಲೆಗೆ ತುಂಬಿಸುವುದರಿಂದಲ್ಲ; ಮಹಾನ್ ಪ್ರಶ್ನೆಯನ್ನು ಅಧ್ಯಯನ ಮಾಡಲು ಅವನನ್ನು ಉತ್ತೇಜಿಸುವುದರಿಂದ ಬಂದಿಲ್ಲ; ಅಥವಾ ಈ ಜಗತ್ತು ಸೆಪ್ಟೆಂಬರ್-೧೩ರಂದು ಸೃಷ್ಟಿಯಾಯಿತೋ ಇಲ್ಲವೊ ಎಂಬುದನ್ನು ತಿಳಿಯುವುದರಿಂದ ಬಂದಿಲ್ಲ, ಜ್ಞಾನದ ಈ ಎಲ್ಲ ಅಂಶಗಳಲ್ಲಿ ಪರಿಣಿತನಾದ ಮೇಲೆ ಅವನನ್ನು "ಪ್ರಾಜ್ಞ ನಿವಾಸಿ" ಎಂದು ಕರೆಯುವುದರಿಂದ ಬಂದಿಲ್ಲ. ಆದರೆ ಅವನಿಗೆ ಈ ವಿದೇಶಿ ಭಾಷೆಗಳನ್ನು ಕಲಿಸುವುದರಿಂದ ಅಗಾಧವಾದ ಜ್ಞಾನದ ಮಾಹಿತಿಯು ಅವನ ಕೈಗೆಟಕುವಂತಾಗಿದೆ. ಪಾಶ್ಚಿಮಾತ್ಯ ಯುರೋಪಿನ ಭಾಷೆಗಳು ರಷ್ಯಾದೇಶವನ್ನು ನಾಗರೀಕತೆಗೆ ತಂದವು. ರಷ್ಯನ್‌ರಿಗೆ (ಟಾರ್ಟಾರ್‌ಗೆ) ಮಾಡಿದ್ದನ್ನು ಅವು ಹಿಂದೂಗಳಿಗೆ ಸಹ ಮಾಡುತ್ತವೆಂಬುದನ್ನು ನಾನು ಅನುಮಾನಿಸಲಾರೆ.

17. ಈ ಮಾರ್ಗದ ವಿರುದ್ಧವಾಗಿರುವ ಇದೇ ರೀತಿಯ ವಾದಗಳು ಯಾವುವು? ಸಿದ್ಧಾಂತ ಮತ್ತು ಅನುಭವದಿಂದ ಸಲಹೆ ಮಾಡಲಾದ ವಾದಗಳು ಯಾವುವು? ಇಲ್ಲಿ ಅವರು ಹೇಳಿರುವುದೇನೆಂದರೆ ನಾವು ಸ್ಥಳೀಯ ಸಾರ್ವಜನಿಕರ ಸಹಕಾರವನ್ನು ಗಳಿಸಿಕೊಳ್ಳಬೇಕು. ನಾವು ಸಂಸ್ಕೃತ ಹಾಗೂ ಅರೇಬಿಕ್ ಕಲಿಸುವುದರಿಂದ ಮಾತ್ರ ಇದನ್ನು ಮಾಡಬಹುದು.

18. ಯಾವ ರೀತಿಯಿಂದಲೂ ಇದನ್ನು ನಾನು ಒಪ್ಪಲಾರೆ; ಉನ್ನತ ಬೌದ್ಧಿಕ ಸಾಧನೆಗಳನ್ನು ಮಾಡಿದ ಒಂದು ದೇಶ ಅಜ್ಞಾನಿಗಳಿರುವ ಇನ್ನೊಂದು ದೇಶದ ಶಿಕ್ಷಣದ ಮೇಲ್ವಿಚಾರಣೆಯನ್ನು ಕೈಗೆತ್ತಿಕೊಂಡಾಗ ಬೋಧಕರು ಯಾವುದನ್ನು ಬೋಧಿಸಬೇಕೆಂದು ಕಲಿಯುವವರೇ ಹೇಳುವಂತ ಸ್ಥಿತಿಯಿರುತ್ತದೆ. ಅದೇನೆ ಆಗಲೀ ಈ ವಿಷಯದ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಉತ್ತರಿಸಲಾಗದ ಸಾಕ್ಷ್ಯವೊಂದು ರುಜುವಾತು ಪಡಿಸುವುದೇನೆಂದರೆ ನಾವು ಈ ಸದ್ಯದಲ್ಲಿ ಈ ವಿಷಯಕ್ಕೆ

ಸಂಬಂಧಿಸಿದಂತೆ ಸ್ಥಳೀಯರ ಸಹಕಾರವನ್ನು ಕೋರುತ್ತಿಲ್ಲ. ಅವರ ಬೌದ್ಧಿಕ ಆರೋಗ್ಯದ ಬೆಲೆ ತೆತ್ತು ಅವರ ಬೌದ್ಧಿಕ ಅಭಿರುಚಿಗೆ ಅನುಗುಣವಾಗಿ ನಡೆದುಕೊಳ್ಳುವುದು ಒಳ್ಳೆಯದಲ್ಲ. ಹಾಗೆ ನಾವು ನಡೆದುಕೊಳ್ಳುತ್ತಲೂ ಇಲ್ಲ. ಅವರಿಗೆ ಸ್ವಾದ ನೀಡುವ ಕಲಿಕೆಯನ್ನು ನಾವು ಅವರಿಗೆ ನೀಡುತ್ತಿಲ್ಲ. ಯಾವ ಅನುಕರಣಾ ಕಲಿಕೆ ಅವರಿಗೆ ಹೇವರಿಕೆ ಬರಿಸುತ್ತದೋ ಅದನ್ನು ನಾವು ಅವರ ಮೇಲೆ ಹೇರಬೇಕಾಗಿದೆ.

19. ನಮ್ಮಿಂದ ಇಂಗ್ಲೀಷ್ ಕಲಿಯುತ್ತಿರುವ ವಿದ್ಯಾರ್ಥಿಗಳು ನಮಗೆ ಹಣ ಸಂದಾಯ ಮಾಡಲು ಮನಸ್ಸು ಮಾಡಿರುವುದರಿಂದ, ನಾವು ಸಂಸ್ಕೃತ ಮತ್ತು ಅರೇಬಿಕ್ ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ಹಣ ಸಂದಾಯ ಮಾಡುವ ಬಲಾತ್ಕಾರಕ್ಕೊಳಗಾಗಿರುವ ವಾಸ್ತವಾಂಶ ಸಾಬೀತಾಗುತ್ತದೆ. ಸ್ಥಳೀಯರಿಗೆ ಅವರ ಪವಿತ್ರ ಆಡುನುಡಿಗಳ ಬಗ್ಗೆ ಇರುವ ಪ್ರೇಮ ಹಾಗೂ ಗೌರವವನ್ನೂ ವಿಶ್ವದ ಎಲ್ಲಾ ವಿಧ್ಯುಕ್ತ ಹೇಳಿಕೆಗಳಿಂದ ಹೇಳಿದರೂ ಸಹ, ಯಾವುದೇ ನಿಷ್ಪಕ್ಷಪಾತ ವ್ಯಕ್ತಿಯೊಬ್ಬನ ಮನಸ್ಸಿನಲ್ಲಿ ಈ ವಿವಾದಾತೀತ ಅಂಶ ಹೆಚ್ಚು ಮಹತ್ವವುಳ್ಳದಾಗುತ್ತದೆ. ನಮ್ಮ ವಿಶಾಲವಾದ ಇಡೀ ಸಾಮ್ರಾಜ್ಯದಲ್ಲಿ ಯಾವೊಬ್ಬ ವಿದ್ಯಾರ್ಥಿಯೂ ಸಹ ನಮ್ಮಿಂದ ಹಣ ಪಡೆಯದೆ ನಮ್ಮ ಪ್ರಾಂತ ಭಾಷೆಯನ್ನು ಕಲಿಯಲು ಸಮ್ಮತಿಸುವುದಿಲ್ಲ.

20. ೧೮೩೩ರ ಡಿಸೆಂಬರ್ ತಿಂಗಳಿನ ಮದರಾಸಗಳ ಒಂದು ತಿಂಗಳಿನ ಲೆಕ್ಕವು ನನ್ನ ಮುಂದಿದೆ. ಅಲ್ಲಿ ಸುಮಾರು ಎಪ್ಪತ್ತೇಳು ಮಂದಿ ಅರೇಬಿಕ್ ವಿದ್ಯಾರ್ಥಿಗಳಿರುವಂತೆ ಕಂಡು ಬರುತ್ತದೆ. ಎಲ್ಲರೂ ಸಾರ್ವಜನಿಕರಿಂದ ವಿದ್ಯಾರ್ಥಿ ವೇತನವನ್ನು ಪಡೆಯುತ್ತಾರೆ. ಅವರೆಲ್ಲರಿಗೂ ಸೇರಿ ತಿಂಗಳಿಗೆ ೫೦೦ ರೂಪಾಯಿಗಳಿಗೆ ಮೇಲ್ಪಟ್ಟು ಸಂದಾಯ ಮಾಡಲಾಗುತ್ತಿದೆ.

ಲೆಕ್ಕದ ಇನ್ನೊಂದು ಕಡೆಯಲ್ಲಿ ಈ ಕೆಳಗಿನದು ಕಂಡುಬರುತ್ತದೆ. - ಇಂಗ್ಲಿಷ್ ಕಲಿಕೆಯಿಂದ ಹೊರ ಹೋಗುತ್ತಿರುವ ವಿದ್ಯಾರ್ಥಿಗಳಿಂದ ಮುರಿದುಕೊಂಡ ಮೊತ್ತ, ಮೇ, ಜೂನ್ ಮತ್ತು ಜುಲೈ ತಿಂಗಳುಗಳಿಗೆ ಸೇರಿದಂತೆ ೧೦೩ ರೂಪಾಯಿಗಳು.

21. ಈ ವಿದ್ಯಮಾನಗಳ ಬಗ್ಗೆ ಸ್ಥಳೀಯ ಅನುಭವಗಳ ಆಧಾರದ ಮೇಲೆ ಹೇಳಿದಾಗ ನನಗೆ ಆಶ್ಚರ್ಯವಾಯಿತು. ಭಾರತದಲ್ಲಿ ವಿದ್ಯಾರ್ಥಿಗಳು ಸ್ವಂತ ಖರ್ಚಿನಲ್ಲಿ ವಿದ್ಯಾಭ್ಯಾಸ ಮಾಡುವುದು ಸಂಪ್ರದಾಯವಲ್ಲ. ಇದು ನನ್ನ ಅಭಿಪ್ರಾಯಗಳನ್ನು ಸಮರ್ಥಿಸುತ್ತದೆ. ಜನರು ಯಾವುದನ್ನು ಸ್ವಇಚ್ಛೆಯಿಂದ ಮಾಡಲು ಇಷ್ಟಪಡುತ್ತಾರೊ ಅಥವಾ ಯಾವುದು ಲಾಭದಾಯಕವಾಗಿದೆಯೊ, ಅದನ್ನು ಮಾಡಿದರೆ, ಅದಕ್ಕಾಗಿ ಅವರಿಗೆ ಹಣ ಸಂದಾಯ ಮಾಡುವುದು ಅವಶ್ಯಕವೆಂಬುದನ್ನು ವಿಶ್ವದ ಯಾವುದೇ ಭಾಗದಲ್ಲಿ ನಾನು ನೋಡಿಲ್ಲ. ಭಾರತವು ಇದಕ್ಕೆ ಅಪವಾದವಲ್ಲ. ಭಾರತದ ಜನರಿಗೆ ಹಸಿವಾದಾಗ ಅನ್ನ ತಿನ್ನಲು ಹಣ ಸಂದಾಯ ಮಾಡಬೇಕಾಗಿಲ್ಲ ಅಥವಾ ಚಳಿಗಾಲದಲ್ಲಿ ಉಣ್ಣೆಬಟ್ಟೆ

ಧರಿಸಿದರೆ ಅದಕ್ಕಾಗಿ ಅವರಿಗೆ ಹಣ ನೀಡಬೇಕಾಗಿಲ್ಲ. ನಮ್ಮ ಮುಂದಿರುವ ವಿಷಯದ ಸಮೀಪಕ್ಕೆ ಬಂದರೆ- ಸ್ವಲ್ಪ ಮಟ್ಟಿನ ಪ್ರಾಥಮಿಕ ಗಣಿತ ಮತ್ತು ಅಕ್ಷರಾಭ್ಯಾಸವನ್ನು ಹಳ್ಳಿಯ ಉಪಾಧ್ಯಾಯರೊಬ್ಬರಿಂದ ಕಲಿಯುವ ಮಕ್ಕಳಿಗೆ ಆ ಉಪಾಧ್ಯಾಯರು ಯಾವುದೇ ಹಣ ಸಂದಾಯ ಮಾಡುತ್ತಿಲ್ಲ. ಆ ಮಕ್ಕಳಿಗೆ ಕಲಿಸುವುದಕ್ಕಾಗಿ ಆ ಉಪಾಧ್ಯಾಯರಿಗೆ ವೇತನ ನೀಡಲಾಗುತ್ತಿದೆ. ಹಾಗಾದರೆ ಸಂಸ್ಕೃತ ಮತ್ತು ಅರಬ್ಬೀ ಭಾಷೆ ಕಲಿಯುವ ಜನರಿಗೇಕೆ ಹಣ ಸಂದಾಯ ಮಾಡುವ ಆವಶ್ಯಕತೆಯಿದೆ? ಸಾರ್ವತ್ರಿಕವಾಗಿ ಹಾಗೂ ಸ್ಪಷ್ಟವಾಗಿ ಎಲ್ಲರಿಗೂ ಅನ್ನಿಸುವುದೇನೆಂದರೆ ಸಂಸ್ಕೃತ ಮತ್ತು ಅರಬ್ಬೀ ಭಾಷೆಗಳ ಜ್ಞಾನ ಅವುಗಳನ್ನು ಕಲಿಯಲು ಬರುವ ತೊಂದರೆಗಳಿಗೆ ಪರಿಹಾರವನ್ನು ಸಹ ನೀಡುವುದಿಲ್ಲ. ಇಂತಹ ವಿಷಯಗಳಲ್ಲಿ ಮಾರುಕಟ್ಟೆಯ ವಾಸ್ತವತೆಯೆ ನಿರ್ಣಾಯಕವಾಗುತ್ತದೆ.

22. ಬೇರೆ ಪುರಾವೆಯ ಅಗತ್ಯವಿದ್ದಲ್ಲಿ, ಆ ಪುರಾವೆಗಳು ಬೇಕಾಗಿಲ್ಲ. ಸಂಸ್ಕೃತ ಕಾಲೇಜಿನ ಹಲವಾರು ಮಾಜಿ ವಿದ್ಯಾರ್ಥಿಗಳು ಕಳೆದ ವರ್ಷ ಸಮಿತಿಗೆ ಅಹವಾಲೊಂದನ್ನು ಸಲ್ಲಿಸಿದ್ದರು. ಈ ಅರ್ಜಿದಾರರು ಕಾಲೇಜಿನಲ್ಲಿ ಹತ್ತು ಅಥವಾ ಹನ್ನೆರಡು ವರ್ಷ ಅಧ್ಯಯನ ಮಾಡಿದ್ದು ಹಿಂದೂ ಸಾಹಿತ್ಯ ಮತ್ತು ವಿಜ್ಞಾನವನ್ನು ತಾವು ತಿಳಿದಿರುವುದಾಗಿಯೂ, ಅದರಲ್ಲಿನ ಪರಿಣತಿಗಾಗಿ ಯೋಗ್ಯತಾ ಪತ್ರವನ್ನು ಪಡೆದುಕೊಂಡಿರುವುದಾಗಿಯೂ ಹೇಳಿರುತ್ತಾರೆ. ಆದರೆ ಇದೆಲ್ಲರ ಫಲವೇನು? ಅಷ್ಟೆಲ್ಲಾ ಪ್ರಮಾಣ ಪತ್ರಗಳನ್ನು ಹೊಂದಿದ್ದರೂ ಸಹ ಅವರು ಹೇಳುವುದೆಂದರೆ – "ನಮಗೆ ನಮ್ಮ ಪರಿಸ್ಥಿತಿಯನ್ನು ನಿಮ್ಮ ಗೌರವಾನ್ವಿತ ಸಮಿತಿಯ ದಯಾಪೂರ್ಣ ಸಹಾಯವಿಲ್ಲದೆ ಉತ್ತಮಪಡಿಸಿಕೊಳ್ಳಲು ಸಾಧ್ಯವಿಲ್ಲ. ನಮ್ಮ ದೇಶದ ಜನ ಸಾಮಾನ್ಯವಾಗಿ ನಮ್ಮನ್ನು ಅಲಕ್ಷ್ಯದಿಂದ ನೋಡುತ್ತಾರೆ. ಅವರಿಂದ ಯಾವ ಸಹಾಯವನ್ನಾಗಲೀ ಅಥವಾ ಪ್ರೋತ್ಸಾಹವನ್ನಾಗಲೀ ನಿರೀಕ್ಷಿಸುವಂತಿಲ್ಲ". ಆದ್ದರಿಂದ ಸರ್ಕಾರದಲ್ಲಿರುವ ಸ್ಥಾನಗಳಿಗಾಗಿ ಗವರ್ನರ್ ಜನರಲ್ ಅವರಿಗೆ ಶಿಫಾರಸ್ಸು ಮಾಡುವಂತೆ ಬೇಡಿಕೊಂಡಿದ್ದಾರೆ. ಅದು ಸಹಾ ಗೌರವಾನ್ವಿತ ಸ್ಥಾನಗಳಿಗಲ್ಲ ಅಥವಾ ಹೆಚ್ಚಿನ ವೇತನ ತರುವ ಸ್ಥಾನಗಳಿಗಲ್ಲ. ಅವರ ಆಸ್ತಿತ್ವವನ್ನು ಖಚಿತಪಡಿಸಿಕೊಳ್ಳಲು ಬೇಕಾಗುವ ಕನಿಷ್ಠ ಸೌಲಭ್ಯವನ್ನು ಮಾತ್ರ ಅವರು ನಿರೀಕ್ಷಿಸುತ್ತಾರೆ. "ನಾವೊಂದು ಸಭ್ಯ ಜೀವನ ನಡೆಸಲು ನಮಗೊಂದು ಸಾಧನವಿರಬೇಕೆಂದು" ಹಾಗೂ "ನಮ್ಮ ಸುಧಾರಣೆ ಸರ್ಕಾರದ ಸಹಾಯವಿಲ್ಲದೆ ಆಗುವುದಿಲ್ಲವೆಂದು" ಅವರು ಹೇಳುತ್ತಾರೆ. ನಮ್ಮನ್ನು ಬಾಲ್ಯದ ದಿನಗಳಿಂದಲೂ ಸರ್ಕಾರವೇ ಶಿಕ್ಷಣ ನೀಡಿ ನೋಡಿಕೊಂಡಿದೆಯೆಂದು ಹೇಳಿದ್ದಾರೆ. ಕೊನೆಗೆ ಅತ್ಯಂತ ಕರುಣಾಜನಕವಾಗಿ ಅವರು ಹೀಗೆ ಹೇಳಿದ್ದಾರೆ. ಅವರ ಶಿಕ್ಷಣದ ಸಮಯದಲ್ಲಿ ಸರ್ಕಾರವು ಅವರ ಬಗ್ಗೆ ಉದಾರತೆಯಿಂದ

ನಡೆದುಕೊಂಡಿದೆ. ಆ ರೀತಿ ನಡೆದುಕೊಂಡಿರುವ ಸರ್ಕಾರದ ಉದ್ದೇಶ, ಖಂಡಿತವಾಗಿ ಅವರನ್ನು ಅಲಕ್ಷಿಸುವುದಲ್ಲ ಅಥವಾ ನಿರಾಶ್ರಯ ಸ್ಥಿತಿಗೆ ತಳ್ಳುವುದಲ್ಲ ಎಂದು ಹೇಳಿದ್ದಾರೆ.

23. ಸರ್ಕಾರಕ್ಕೆ ಪರಿಹಾರಕ್ಕಾಗಿ ಬರುವ ಅರ್ಜಿಗಳನ್ನು ನೋಡುವುದು ನನಗೆ ಅಭ್ಯಾಸವಾಗಿ ಹೋಗಿದೆ. ಬಹುತೇಕ ಅಸಂಬದ್ಧವಾದ ಈ ಎಲ್ಲ ಅರ್ಜಿಗಳೂ ಏನೋ ನಷ್ಟ ಅನುಭವಿಸಲಾಗಿದೆ ಅಥವಾ ಎಂತಹುದೊ ಕೆಡುಕನ್ನು ಎಸಗಲಾಗಿದೆ ಎಂಬಂತಹ ತರ್ಕದಿಂದ ಪ್ರಾರಂಭವಾಗುತ್ತದೆ. ಇವರು ನಿಶ್ಚಿತವಾಗಿ ಮೊದಲ ಅರ್ಜಿದಾರರಾಗಿದ್ದು ಉಚಿತ ಶಿಕ್ಷಣ ಹೊಂದಿದ್ದಕ್ಕಾಗಿ ಎಂದಿಗೂ ಪರಿಹಾರವನ್ನು ಕೋರಿದವರಲ್ಲ; ಸುಮಾರು ಹನ್ನೆರಡು ವರ್ಷಗಳವರೆಗೆ ಸಾರ್ವಜನಿಕರಿಂದ ಬೆಂಬಲಿಸಲ್ಪಟ್ಟು, ಅನಂತರದಲ್ಲಿ ಸಾಹಿತ್ಯ ಮತ್ತು ವಿಜ್ಞಾನವನ್ನು ಚೆನ್ನಾಗಿ ಕಲಿತು ಈ ಜಗತ್ತಿಗೆ ಕಳುಹಿಸಲ್ಪಟ್ಟವರು ತಮ್ಮ ಶಿಕ್ಷಣವು ತಮಗಾದ ಒಂದು ಗಾಯವೆಂಬುದನ್ನು ಅವರು ಪ್ರತಿಪಾದಿಸುತ್ತಾರೆ. ಅದಕ್ಕಾಗಿ ಅವರು ಸರ್ಕಾರದಿಂದ ಪರಿಹಾರ ಕೇಳಬಹುದೆಂದು ಭಾವಿಸಿದ್ದಾರೆ. ಅವರಿಗಾದ ನೋವಿಗೆ, ಅವರು ಪಡೆಯುತ್ತಿದ್ದ ವಿದ್ಯಾರ್ಥಿ ವೇತನ ಅವರಿಗೆ ಸಾಕಾಗದ ಪರಿಹಾರವಾಗಿತ್ತು. ಅವರು ಸರಿಯಾಗಿ ಹೇಳುತ್ತಿದ್ದಾರೆಂಬುದರಲ್ಲಿ ನನಗೆ ಅನುಮಾನವಿಲ್ಲ. ಅವರು ತಮ್ಮ ಜೀವನದ ಅಮೂಲ್ಯ ವರ್ಷಗಳನ್ನು ಕಳೆದುಕೊಂಡಿದ್ದಾರೆ. ಅವರು ಕಲಿತದ್ದು ಅವರಿಗೆ ಅನ್ನವನ್ನಾಗಲೀ ಅಥವಾ ಗೌರವವನ್ನಾಗಲೀ ತರಲಿಲ್ಲ. ಈ ವ್ಯಕ್ತಿಗಳನ್ನು ನಿಷ್ಪ್ರಯೋಜಕರನ್ನಾಗಿ ಮತ್ತು ದುಃಖಿತರನ್ನಾಗಿ ಮಾಡುವ ವೆಚ್ಚವನ್ನು ನಾವು ನಿಶ್ಚಿತವಾಗಿ ಉಳಿಸಬಹುದಿತ್ತು. ಮನುಷ್ಯರನ್ನು ಸಾರ್ವಜನಿಕರಿಗೆ ಹೊರೆಯಾಗುವ ರೀತಿಯಲ್ಲಿ ಬೆಳೆಸುವುದು, ಅವರ ನೆರೆಹೊರೆಯುವರು ಅವರನ್ನು ಅಲಕ್ಷ ಮಾಡುವುದು ರಾಜ್ಯಕ್ಕೆ ನಿಶ್ಚಿತವಾಗಿ ಒಂದು ಸಣ್ಣ ಪ್ರಮಾಣದ ವೆಚ್ಚವಾಗುತ್ತದೆ. ಆದರೆ ಅದು ನಮ್ಮ ನೀತಿಯಾಗಿದೆ. ಸತ್ಯ ಮತ್ತು ಸುಳ್ಳಿನ ಸಂಘರ್ಷದ ನಡುವೆ ನಾವು ತಟಸ್ಥರಾಗಿ ಇರಲಾಗುವುದಿಲ್ಲ. ನಾವು ಸ್ಥಳೀಯರನ್ನು ಅವರ ಸ್ವಂತ ಆನುವಂಶಿಕ ಪೂರ್ವಗ್ರಹಗಳ ಪ್ರಭಾವಕ್ಕೆ ಬಿಟ್ಟು ಸಮಾಧಾನದಿಂದ ಇರಲಾಗುವುದಿಲ್ಲ. ಪೂರ್ವದಲ್ಲಿ ಒಳ್ಳೆಯ ವಿಜ್ಞಾನದ ಪ್ರಗತಿಗೆ ಅಡಚಣೆಯಾಗುವ ಸ್ವಾಭಾವಿಕ ತೊಡಕುಗಳಿಗೆ ನಾವು ನಮ್ಮದೆ ಆದ ಇನ್ನು ಹೆಚ್ಚಿನ ತೊಡಕುಗಳನ್ನು ಸೇರಿಸುತ್ತಿದ್ದೇವೆ. ಸತ್ಯದ ಪ್ರಚಾರಕ್ಕೆ ಸಹ ಇನಾಮುಗಳನ್ನಾಗಲಿ ಅಥವಾ ಯಾವುದೇ ರೀತಿಯ ಹಣವನ್ನಾಗಲೀ ಕೊಡಬಾರದು. ಆದರೆ ನಾವು ಸುಳ್ಳು ಪಠ್ಯಗಳಿಗೆ ಮತ್ತು ಸುಳ್ಳು ತತ್ತ್ವಶಾಸ್ತ್ರಗಳಿಗೆ ದುಂದುವೆಚ್ಚ ಮಾಡುತ್ತಿದ್ದೇವೆ.

24. ಈ ರೀತಿ ವರ್ತಿಸುವುದರಿಂದ ಹೆದರಿಕೆ ಎಂಬ ಅನಿಷ್ಟವನ್ನು ನಾವೇ ಸೃಷ್ಟಿಸುತ್ತಿದ್ದೇವೆ. ನಾವು ಕಾಣಲಾಗದ ವಿರೋಧವನ್ನು ನಾವೇ ಸೃಷ್ಟಿಸುತ್ತಿದ್ದೇವೆ. ನಾವು ಅರೇಬಿಕ್ ಮತ್ತು ಸಂಸ್ಕೃತ ಕಾಲೇಜುಗಳ

ಮೇಲೆ ಮಾಡುತ್ತಿರುವ ವೆಚ್ಚ ಸಂಪೂರ್ಣ ನಷ್ಟದ ಬಾಬ್ತಾಗಿದ್ದು ಅದು ಸತ್ಯ ಶೋಧನೆಗೆ ನಿಷ್ಪ್ರಯೋಜಕವಾಗಿದೆ. ಅದು ತಪ್ಪುಗಳ ಸರದಾರರನ್ನು ಬೆಳೆಸುವ ಪುಕ್ಕಟೆ ವೆಚ್ಚವಾಗಿದೆ. ಇದು ನಿಸ್ಸಹಾಯಕ ಉದ್ಯೋಗಾಕಾಂಕ್ಷಿಗಳ ಗುಂಪನ್ನು ಸೃಷ್ಟಿಸುವುದಲ್ಲದೆ, ಧರ್ಮಾಂಧರೆಲ್ಲರೂ ಒಂದಾಗಿ ಭಾವಾವೇಶದಿಂದ ಮತ್ತು ಸ್ವಹಿತಾಸಕ್ತಿಯಿಂದ ಪ್ರತಿಯೊಂದು ಶಿಕ್ಷಣದ ಉಪಯುಕ್ತ ವಿಧಾನದ ವಿರುದ್ಧ ಹುಯಿಲೆಬ್ಬಿಸುವ ಉದ್ದೇಶವನ್ನು ಹೊಂದಿದೆ. ತಪ್ಪು ಮಾಡುವುದರಲ್ಲಿ ಸರ್ವೋತ್ಕೃಷ್ಟರನ್ನು ಪೋಷಿಸಲು ವಿನಿಯೋಗಿಸಲಾದ ಬಿಟ್ಟಿ ಹಣ ಅದು. ನಾನು ಶಿಫಾರಸ್ಸು ಮಾಡುವ ಬದಲಾವಣೆಗಳಿಗೆ ಸ್ಥಳೀಯರಿಂದ ವಿರೋಧವೇನಾದರೂ ಇದ್ದಲ್ಲಿ ಆ ವಿರೋಧ ನಮ್ಮ ವ್ಯವಸ್ಥೆಯ ಪರಿಣಾಮವಷ್ಟೆ. ನಮ್ಮ ವಿದ್ಯಾರ್ಥಿ ವೇತನದಿಂದ ಬೆಂಬಲಿಸಲ್ಪಟ್ಟು, ನಮ್ಮ ಕಾಲೇಜುಗಳಲ್ಲೇ ತರಬೇತಿ ಹೊಂದಿದ ವ್ಯಕ್ತಿಗಳು ಅದನ್ನು ಮುನ್ನಡೆಸುತ್ತಿರುತ್ತಾರೆ. ಹಾಲಿ ಪರಿಸ್ಥಿತಿಯನ್ನು ನಾವು ಎಲ್ಲಿಯವರೆಗೆ ಉಳಿಸಿಕೊಳ್ಳುತ್ತೇವೊ ಅಲ್ಲಿಯವರೆಗೆ ಈ ವಿರೋಧವು ಬೆಳೆಯುತ್ತಲೆ ಹೋಗುತ್ತದೆ. ಪ್ರತಿವರ್ಷವೂ ಈ ವಿರೋಧವನ್ನು ನಮ್ಮಿಂದ ಹಣ ಪಡೆವ ಹೊಸ ವಿದ್ಯಾರ್ಥಿಗಳು ಬಲಪಡಿಸುತ್ತಾ ಹೋಗುತ್ತಾರೆ. ಸ್ಥಳೀಯ ಸಮಾಜವನ್ನು ಹಾಗೆ ಬಿಟ್ಟು ಬಿಟ್ಟರೆ ನಾವು ತೊಡಕುಗಳ ಬಗ್ಗೆ ಆತಂಕ ಪಡಬೇಕಾಗಿಲ್ಲ. ಈಗ ಗೊಣಗುತ್ತಿರುವವರೆಲ್ಲರೂ ಆ ಪೌರಸ್ತ್ಯ ಹಿತಾಸಕ್ತಿಯಿಂದ ಬಂದವರು. ನಾವು ಅವರನ್ನು ಕೃತಕ ಸಾಧನದಿಂದ ಆಸ್ತಿತ್ವಕ್ಕೆ ತಂದು ಅವರಿಗೆ ಬಲ ಬರುವಂತೆ ಪೋಷಿಸಿದ್ದೇವೆ.

25. ಇಲ್ಲಿ ಇನ್ನೊಂದು ಅಂಶವಿದೆ. ಸ್ಥಳೀಯ ಸಾರ್ವಜನಿಕರನ್ನು ಅವರಷ್ಟಕ್ಕೆ ಅವರನ್ನು ಬಿಟ್ಟು ಬಿಟ್ಟರೆ ಅವರು ಹಳೆಯ ವ್ಯವಸ್ಥೆಯನ್ನು ಬೆಂಬಲಿಸುವವರ ಪೈಕಿಯಲ್ಲ. ಈ ಮೇಲಿನ ಮಾತುಗಳನ್ನು ರುಜುವಾತುಪಡಿಸಲು ಇದೊಂದೇ ಅಂಶ ಸಾಕಾಗುತ್ತದೆ. ಸಂಸ್ಕೃತ ಮತ್ತು ಅರೇಬಿಕ್ ಪುಸ್ತಕಗಳ ಮುದ್ರಣಕ್ಕೆ ಒಂದು ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡುವುದು ಸೂಕ್ತವೆಂದು ಸಮಿತಿಯು ಯೋಚಿಸಿದೆ. ಆದರೆ ಈ ಪುಸ್ತಕಗಳನ್ನು ಕೊಳ್ಳುವವರೇ ಇಲ್ಲ. ಅತೀ ವಿರಳವಾಗಿ ಪುಸ್ತಕದ ಒಂದು ಪ್ರತಿ ಮಾರಾಟವಾಗುತ್ತಿದೆ. ಈ ಪುಸ್ತಕಗಳ ಇಪ್ಪತ್ತೊಂರು ಸಾವಿರ ಸಂಪುಟಗಳು ಅವುಗಳಲ್ಲಿ ಬಹುಪಾಲು ಫೋಲಿಯೋ ಅಥವಾ ಕ್ವಾರ್ಟೊ ಗಾತ್ರದವು ಗ್ರಂಥಾಲಯದ ಅಥವಾ ಆ ಕಟ್ಟಡದ ಇತರ ಕೊಠಡಿಗಳ ಮೂಲೆಯನ್ನು ಸೇರಿವೆ. ಈ ಪೌರಸ್ತ್ಯ ಯ ಸಾಹಿತ್ಯದ ವಿಶಾಲ ಸಂಗ್ರಹದ ಒಂದು ಭಾಗವನ್ನು ಹೇಗಾದರೂ ಕರಗಿಸಲು ಸಮಿತಿಯು ಪುಸ್ತಕಗಳನ್ನು ಉಚಿತವಾಗಿ ಕೊಟ್ಟು ಬಿಡುತ್ತಿದೆ. ಅವರು ಅದನ್ನು ಮುದ್ರಿಸುವಷ್ಟು ವೇಗದಲ್ಲಿ ಕೊಡಲಾಗುತ್ತಿಲ್ಲ. ವರ್ಷವೊಂದಕ್ಕೆ ಇಪ್ಪತ್ತು ಸಾವಿರ ರೂಪಾಯಿಗಳಷ್ಟು ಮೊತ್ತವನ್ನು ಹೊಸ ರದ್ದಿ ಕಾಗದಗಳಿಗಾಗಿ ವ್ಯಯಿಸಲಾಗುತ್ತಿದೆ. ಈಗಾಗಲೇ ಅದು ಸಾಕಷ್ಟು ಹೇರಳವಾಗಿದೆ ಎಂದು

ನಾವು ಗಮನಿಸಬಹುದು. ಕಳೆದ ಮೂರು ವರ್ಷಗಲ್ಲಿ ಅರವತ್ತು ಸಾವಿರ ರೂಪಾಯಿಗಳನ್ನು ಈ ರೀತಿ ವ್ಯಯಿಸಲಾಗಿದೆ. ಆ ಮೂರು ವರ್ಷಗಳಲ್ಲಿ ಸಂಸ್ಕೃತ ಮತ್ತು ಅರೇಬಿಕ್ ಪುಸ್ತಕಗಳ ಮಾರಾಟದ ಮೊತ್ತ ಒಂದು ಸಾವಿರ ರೂಪಾಯಿಗಳನ್ನು ಸಹ ಮುಟ್ಟಿಲ್ಲ. ಈ ಮಧ್ಯದಲ್ಲಿ ಶಾಲಾ ಪುಸ್ತಕ ಸೊಸೈಟಿಯು ಏಳು ಅಥವಾ ಎಂಟು ಸಾವಿರಗಳಷ್ಟು ಇಂಗ್ಲಿಷ್ ಸಂಪುಟಗಳನ್ನು ಪ್ರತಿವರ್ಷವೂ ಮಾರಾಟ ಮಾಡುತ್ತಿದೆ. ಅದು ಮುದ್ರಣದ ಖರ್ಚುಗಳನ್ನು ಭರಿಸುವುದಷ್ಟೇ ಅಲ್ಲದೆ ಶೇಕಡ ಇಪ್ಪತ್ತರಷ್ಟು ಲಾಭವನ್ನು ಗಳಿಸುತ್ತಿದೆ.

26. ಹಿಂದೂ ಕಾನೂನನ್ನು ಪ್ರಮುಖವಾಗಿ ಸಂಸ್ಕೃತ ಪುಸ್ತಕಗಳಿಂದ ಮತ್ತು ಮೊಹಮದೀ ಕಾನೂನನ್ನು ಅರೇಬಿಕ್ ಪುಸ್ತಕಗಳಿಂದಲೇ ಕಲಿಯಬೇಕೆಂದು ಆಗ್ರಹಪಡಿಸಲಾಗುತ್ತಿದೆ. ಆದರೆ ಅದರಿಂದ ಕೆಲವು ಪ್ರಶ್ನೆಗಳಿಗೆ ಉತ್ತರವೇ ದೊರಕುವುದಿಲ್ಲ. ಭಾರತದ ಕಾನೂನುಗಳನ್ನು ಅರಿತು ಅವುಗಳನ್ನು ಅರಗಿಸಿಕೊಳ್ಳಬೇಕೆಂದು ನಮಗೆ ಸಂಸತ್ತು ಆಜ್ಞಾಪಿಸಿದೆ. ಈ ಉದ್ದೇಶಕ್ಕಾಗಿ ನಮಗೆ ಕಾನೂನು ಆಯೋಗದ ಸಹಾಯವನ್ನು ನೀಡಲಾಗಿದೆ. ಕೋಡ್‌ಗಳನ್ನು ಜಾರಿಗೊಳಿಸಿದ ತತ್‌ಕ್ಷಣದಿಂದಲೇ ಶಾಸ್ತ್ರಗಳು ಮತ್ತು ಹಿದಾಯಗಳು (ಅರೆಬಿಕ್ ಶಬ್ದ: ಮಾರ್ಗಸೂಚಿಗಳು) ಮುನ್ಸಿಫ್ ಮತ್ತು ಸದರ್ ಅಮೀನ್‌ಗಳಿಗೆ ನಿಷ್ಪ್ರಯೋಜಿತವಾಗುತ್ತದೆ. ಈಗ ಹುಡುಗರು ತಮ್ಮ ಅಧ್ಯಯನವನ್ನು ಪೂರ್ಣಗೊಳಿಸಲು ಮದರಸಾಗಳಿಗೆ ಮತ್ತು ಸಂಸ್ಕೃತ ಕಾಲೇಜುಗಳಿಗೆ ಪ್ರವೇಶಾತಿ ಪಡೆಯುವ ಮೊದಲೆ ಈ ಮಹಾನ್ ಕಾರ್ಯವು ಮುಗಿಯುತ್ತದೆಂಬ ಭರವಸೆ ಹಾಗೂ ನಂಬಿಕೆ ನನಗಿದೆ. ಹೊಸ ತಲೆಮಾರಿನವರನ್ನು ಅವರು ಪ್ರಾಯಸಮರ್ಥರಾಗುವ ಮೊದಲೇ ನಾವು ಅರ್ಥೈಸುವ ಸ್ಥಿತಿಗೆ ತಕ್ಕಂತೆ ಶಿಕ್ಷಿತರನ್ನಾಗಿ ಮಾಡುವ ದೃಷ್ಟಿ ಅಸಂಬದ್ಧವೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

27. ಆದರೆ ಅಲ್ಲಿ ಇನ್ನೊಂದು ವಾದವಿದೆ. ಅದು ಇನ್ನೂ ಅಸಹನೀಯವೆಂದು ಕಂಡುಬರುತ್ತದೆ. ಸಂಸ್ಕೃತ ಮತ್ತು ಅರಬ್ಬಿ ಭಾಷೆಗಳಲ್ಲಿ ಲಕ್ಷಾಂತರ ಮಂದಿ ಪೂಜಿಸುವ ಪವಿತ್ರ ಗ್ರಂಥಗಳ ರಚನೆಯಾಗಿರುವುದರಿಂದ ಅವುಗಳಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಬೇಕೆಂದು ಹೇಳಲಾಗಿದೆ. ಭಾರತದಲ್ಲಿನ ಬ್ರಿಟಿಷ್ ಸರ್ಕಾರ ಎಲ್ಲ ಧಾರ್ಮಿಕ ಪ್ರಶ್ನೆಗಳ ಬಗ್ಗೆ ಸಹನೆಯಿಂದಿರುವುದು ಮಾತ್ರವಲ್ಲದೆ ಅದೆಲ್ಲದರ ಬಗ್ಗೆ ತಟಸ್ಥವಾಗಿರುವುದು ಅದರ ಕರ್ತವ್ಯವಾಗಿದೆ. ಆದರೆ ಈಗಾಗಲೇ ಒಪ್ಪಿಕೊಂಡಿರುವಂತೆ ಅತಿ ಅಲ್ಪವಾದ ಆಂತರಿಕ ಮೌಲ್ಯವಿರುವ ಸಾಹಿತ್ಯದ ಅಧ್ಯಯನವನ್ನು ಪ್ರೋತ್ಸಾಹಿಸುವುದು ಸರಿಯಲ್ಲ. ಏಕೆಂದರೆ ಆ ಸಾಹಿತ್ಯವು ಅತ್ಯಂತ ಮಹತ್ತ್ವಪೂರ್ಣ ವಿಷಯಗಳ ಮೇಲೆ ಗಂಭೀರ ಸ್ವರೂಪದ ತಪ್ಪುಗಳನ್ನು ಸೇರಿಸಿಬಿಡುತ್ತದೆ. ಅದನ್ನು ವಿವೇಕಪೂರ್ಣವಾಗಿ, ನೈತಿಕವಾಗಿ ಹಾಗೂ ಮೇಲೆ ಹೇಳಿದ

ತಟಸ್ಥತೆಯಿಂದ ವಿವೇಚಿಸಲಾಗುವುದಿಲ್ಲ. ಇದೆಲ್ಲವನ್ನು ಪವಿತ್ರವಾಗಿ ಉಳಿಸಿಕೊಳ್ಳಲಾಗುವುದಿಲ್ಲ. ಆ ಭಾಷೆಗಳು ಸೀಮಿತವಾಗಿದ್ದು ಉಪಯುಕ್ತ ಜ್ಞಾನದ ವಿಷಯದಲ್ಲಿ ಬರಡಾಗಿವೆ. ಭಯಾನಕ ಮೂಢನಂಬಿಕೆಗಳು, ಸುಳ್ಳು ಇತಿಹಾಸ, ಸುಳ್ಳು ಖಗೋಳಶಾಸ್ತ್ರ, ಸುಳ್ಳು ವೈದ್ಯಕೀಯವನ್ನು ಯಶಸ್ವಿಯಾಗಿ ಕಲಿಸಬೇಕೆಂದರೆ ಈ ಭಾಷೆಗಳು ಉಪಯುಕ್ತವಾಗಿವೆ. ಏಕೆಂದರೆ ಇವುಗಳೆಲ್ಲವೂ ಒಂದು ಸುಳ್ಳು ಧರ್ಮದ ಸಹವಾಸದಲ್ಲಿದೆ. ನಾವು ಇದರಿಂದ ದೂರವಿರುತ್ತೇವೆ ಮತ್ತು ಸ್ಥಳೀಯರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಪರಿವರ್ತಿಸುವ ಕಾರ್ಯದಲ್ಲಿ ತೊಡಗಿರುವವರಿಗೆ ಯಾವುದೇ ಸಾರ್ವಜನಿಕ ಪ್ರೋತ್ಸಾಹ ಕೊಡುವುದರಿಂದ ನಾನು ಯಾವಾಗಲೂ ದೂರವಿರುತ್ತೇನೆ. ನಾವು ಪೌರ್ವಾತ್ಯರಂತೆ ವರ್ತಿಸಿದರೆ ರಾಜ್ಯದ ಆದಾಯದಿಂದ ವಿವೇಕಯುತವಾಗಿ ಅಥವ ಸಭ್ಯವಾಗಿ ವ್ಯಕ್ತಿಗಳಿಗೆ ಲಂಚ ನೀಡುತ್ತಿರುತ್ತೇವೆ, ಅವರು ಕತ್ತೆಯನ್ನು ಮುಟ್ಟಿದ ಅನಂತರ ತಮ್ಮನ್ನು ತಾವು ಶುದ್ಧೀಕರಿಸಿಕೊಳ್ಳುವುದನ್ನು ಕಲಿಯಲು ಅಥವಾ ಒಂದು ಆಡನ್ನು ಕೊಂದ ಅಪರಾಧಕ್ಕಾಗಿ ವೇದಪಠ್ಯಗಳನ್ನು ಪುನರುಚ್ಚರಿಸಲು ತಮ್ಮ ಯೌವನವನ್ನು ಹಾಳು ಮಾಡಿಕೊಳ್ಳುವುದನ್ನು ಪ್ರೋತ್ಸಾಹಿಸುತ್ತಿರುವುದಿಲ್ಲವೇ?

28. ಪೌರಸ್ತ್ಯ ಕಲಿಕೆಯ ವಕ್ತಾರರು, ಇಂಗ್ಲೀಷ್ ಕಲಿಕೆಯನ್ನು ಅಲ್ಪವಿದ್ಯೆಯೆಂದು ಲಘುವಾಗಿ ತೆಗೆದುಕೊಂಡು ಈ ದೇಶದ ಸ್ಥಳೀಯರು ಅದರಿಂದ ಏನನ್ನು ಸಾಧಿಸಲಾಗುವುದಿಲ್ಲವೆಂದು ಹೇಳುತ್ತಾರೆ. ಆದರೆ ಇದನ್ನು ರುಜುವಾತುಪಡಿಸಲು ಅವರು ಪ್ರಯತ್ನಿಸುವುದಿಲ್ಲ. ಆದರೆ ಅವರು ಸತತವಾಗಿ ಇದನ್ನು ಚಿತಾವಣೆ ಮಾಡುತ್ತಿರುತ್ತಾರೆ. ಅವರ ವಿರೋಧಿಗಳು ಸಲಹೆ ಮಾಡುವ ಶಿಕ್ಷಣಕ್ಕೆ ಅವರು ಅಕ್ಷರಮಾಲೆಯ ಕಾಗುಣಿತದ ಶಿಕ್ಷಣವೆಂಬ ಹೆಸರು ಕೊಡುತ್ತಾರೆ. ಪ್ರಶ್ನೆಯಿರುವುದು ಹಿಂದೂ ಪ್ರಗಾಢ ಜ್ಞಾನ ಮತ್ತು ಅರೇಬಿಯನ್ ಸಾಹಿತ್ಯ ಮತ್ತು ವಿಜ್ಞಾನ ಒಂದೆಡೆಯಲ್ಲಿ ಹಾಗೂ ಇನ್ನೊಂದೆಡೆಯಲ್ಲಿ ಹುರುಳಿಲ್ಲದ ಇಂಗ್ಲಿಷ್ ಜ್ಞಾನದ ಅವಶೇಷಗಳ ನಡುವೆ ಎಂಬುದನ್ನು ಅಲ್ಲಗಳೆಯಲಾಗದು ಎಂದು ಭಾವಿಸುತ್ತಾರೆ. ಇದೊಂದು ಬರೀ ಊಹೆ ಮಾತ್ರವಲ್ಲ, ಎಲ್ಲ ವಿವೇಚನೆ ಹಾಗೂ ಅನುಭವಗಳಿಗೆ ವ್ಯತಿರಿಕ್ತವಾದ ಊಹೆಯಾಗಿದೆ. ಎಲ್ಲ ದೇಶಗಳ ವಿದೇಶಿಯರೂ ಗಹನವಾದ ವಿಷಯಗಳ ಪರಿಚಯ ಮಾಡಿಕೊಳ್ಳಲು ಮತ್ತು ನಮ್ಮ ಪ್ರಸಿದ್ಧ ಲೇಖಕರ ಸೂಕ್ಷ್ಮತೆಗಳನ್ನು ಗ್ರಹಿಸಲು ನಮ್ಮ ಭಾಷೆಯನ್ನು ಸಾಕಾಗುವಷ್ಟು ಮಟ್ಟಿಗೆ ಕಲಿಯುತ್ತಾರೆಂಬುದು ನಮಗೆ ತಿಳಿದಿದೆ. ಈ ಪಟ್ಟಣದಲ್ಲಿಯೇ ಇರುವ ಸ್ಥಳೀಯರು, ರಾಜಕೀಯ ಹಾಗೂ ವೈಜ್ಞಾನಿಕ ವಿಷಯಗಳನ್ನು ಇಂಗ್ಲಿಷ್ ಭಾಷೆಯಲ್ಲಿ ನಿರರ್ಗಳವಾಗಿ ಮತ್ತು ನಿಖರವಾಗಿ ಚರ್ಚಿಸಲು ತೀರ ಸಮರ್ಥರಾಗಿದ್ದಾರೆ. ನಾನು ಇದೀಗ ಬರೆಯುತ್ತಿರುವ ಪ್ರಶ್ನೆಯ ಬಗ್ಗೆಯೇ ಸ್ಥಳೀಯ ಮಹನೀಯರೊಬ್ಬರು ಬುದ್ಧಿವಂತಿಕೆಯಿಂದ ಹಾಗೂ ನಿಷ್ಪಕ್ಷಪಾತತೆಯಿಂದ ಚರ್ಚಿಸಿದರೆಂದು ನಾನು ಕೇಳಿದ್ದೇನೆ. ಇದು

ಸಾರ್ವಜನಿಕ ಶಿಕ್ಷಣ ಸಮಿತಿಯ ಯಾವುದೇ ಸದಸ್ಯರಿಗೆ ಗೌರವ ತರುವಂತಹ ವಿಷಯವಾಗಿದೆ. ಅನೇಕ ಹಿಂದೂಗಳು ಲೀಲಾಜಾಲವಾಗಿ ಮತ್ತು ಕರಾರುವಾಕ್ಕಾಗಿ ಅಭಿವ್ಯಕ್ತಿಸುವ ಮಟ್ಟಿಗೆ, ಈ ಖಂಡದ ಸಾಹಿತ್ಯಕ ವಲಯದಲ್ಲಿ ಕೂಡ ಯಾವುದೇ ವಿದೇಶಿಯನೊಬ್ಬ ಅಭಿವ್ಯಕ್ತಿಸುವುದನ್ನು ಕಾಣುವುದು ವಿರಳವಾಗಿದೆ. ಒಬ್ಬ ಇಂಗ್ಲಿಷ್ ವ್ಯಕ್ತಿಗೆ ಗ್ರೀಕ್ ಭಾಷೆ ಕಠಿಣವಾಗಿ ಕಾಣಿಸುವಷ್ಟು ಹಿಂದೂ ಆದವನೊಬ್ಬನಿಗೆ ಇಂಗ್ಲಿಷ್ ಕಾಣಿಸುತ್ತದೆಂದು ಯಾರೂ ಹೇಳುವುದಿಲ್ಲವೆಂದು ನಾನು ಭಾವಿಸುತ್ತೇನೆ. ಆದರೂ ಸಹ ಬುದ್ಧಿವಂತ ಇಂಗ್ಲಿಷ್ ಯುವಕನೊಬ್ಬ ಇನ್ನೂ ಕಡಮೆ ವರ್ಷಗಳ ಅವಧಿಯಲ್ಲಿ ನಮ್ಮ ಸಂಸ್ಕೃತ ಕಾಲೇಜಿನಲ್ಲಿ ತೇರ್ಗಡೆಯಾಗುವ ದುರದೃಷ್ಟ ವಿದ್ಯಾರ್ಥಿಗಳಿಗಿಂತ ಮುಂದಿರುತ್ತಾನೆ. ಅವನು ಗ್ರೀಕ್ ಲೇಖಕರ ಉತ್ತಮ ರಚನೆಗಳನ್ನು ಓದಿ ಆಸ್ವಾದಿಸುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಹಿಂದೂ ಒಬ್ಬನು ಹ್ಯೂಮ್ ಮತ್ತು ಮಿಲ್ಟನ್ ಅನ್ನು ಓದುವ ಕಾಲಾವಧಿಯ ಅರ್ಧದಲ್ಲಿ ಇಂಗ್ಲಿಷ್ ಯುವಕ ಹೆರೊಡೊಟಸ್ ಮತ್ತು ಸೊಫೊಕ್ಲೆಸ್ ಓದಲು ಸಮರ್ಥನಾಗಿರುತ್ತಾನೆ.

29. ನಾನು ಈವರೆಗೂ ಹೇಳಿದ್ದರ ಒಟ್ಟು ಸಾರಾಂಶವೆಂದರೆ, ನಾವು ಸಂಸತ್ತಿನ ೧೮೧೩ರ ಶಾಸನದಿಂದ ಬಂಧಿತರಾಗಿಲ್ಲ. ಅಥವ ಯಾವುದೇ ಅಭಿವ್ಯಕ್ತ ಮತ್ತು ಅನ್ವಯವಾಗುವ ಪ್ರತಿಜ್ಞೆಯಿಂದಲೂ ಬಂಧಿತರಾಗಿಲ್ಲ. ನಾವು ನಮ್ಮ ಆಯ್ಕೆಗೆ ತಕ್ಕಂತೆ ನಮ್ಮ ನಿಧಿಯನ್ನು ಬಳಸಲು ಮುಕ್ತರಾಗಿದ್ದೇವೆ. ನಾವು ಆ ಹಣವನ್ನು ಯಾವುದನ್ನು ಕಲಿಯುವುದು ಮೌಲ್ಯಯುತವೊ ಅಂತಹ ಜ್ಞಾನವನ್ನು ಬೋಧಿಸಲು ಉಪಯೋಗಿಸುತ್ತೇವೆ. ಸಂಸ್ಕೃತಕ್ಕಿಂತ ಇಂಗ್ಲಿಷ್ ಕಲಿಯುವುದು ಹೆಚ್ಚು ಮೌಲ್ಯಯುತವಾಗಿದ್ದರೆ ಅಂತಹ ಜ್ಞಾನವನ್ನು ಬೋಧಿಸಲು ಉಪಯೋಗಿಸುತ್ತೇವೆ. ಸಂಸ್ಕೃತಕ್ಕಿಂತ ಇಂಗ್ಲೀಷ್ ಕಲಿಯುವುದು ಹೆಚ್ಚು ಮೌಲ್ಯಯುತವಾಗಿದೆ. ಸ್ಥಳೀಯರಿಗೆ ಇಂಗ್ಲೀಷ್ ಕಲಿಯುವ ಬಯಕೆ ಇದೆ ಮತ್ತು ಅವರಿಗೆ ಸಂಸ್ಕೃತ ಅಥವಾ ಅರೇಬಿಕ್ ಭಾಷೆಗಳನ್ನು ಕಲಿಯುವ ಇಚ್ಛೆಯಿಲ್ಲ. ಅವುಗಳು ಕಾನೂನಿನ ಭಾಷೆಗಳೂ ಅಲ್ಲ. ಅಥವ ಧಾರ್ಮಿಕ ಭಾಷೆಗಳೂ ಅಲ್ಲ. ಸಂಸ್ಕೃತ ಮತ್ತು ಅರೇಬಿಕ್ ಭಾಷೆಗಳನ್ನು ನಾವು ಪ್ರೋತ್ಸಾಹಿಸಲು ಅವುಗಳಲ್ಲಿ ಯಾವ ವಿಶೇಷತೆಯೂ ಇಲ್ಲ. ಈ ದೇಶದ ಪ್ರಜೆಗಳನ್ನು ಸಮಗ್ರವಾಗಿ ಒಳ್ಳೆಯ ಇಂಗ್ಲೀಷ್ ವಿದ್ವಾಂಸರನ್ನಾಗಿ ಮಾಡುವ ಸಾಧ್ಯತೆಯಿದೆ. ಈ ದೆಶೆಯಲ್ಲಿ ನಮ್ಮ ಪ್ರಯತ್ನಗಳನ್ನು ಮಾಡಬೇಕಾಗಿದೆ.

30. ಕೆಲವು ಮಹನೀಯರ ಸಾರ್ವತ್ರಿಕ ದೃಷ್ಟಿಯನ್ನು ನಾನು ಒಪ್ಪದಿದ್ದರೂ ಸಹ ಅವರ ಒಂದು ಅಂಶವನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ನಮ್ಮ ಸೀಮಿತವಾದ ಸಾಧನಗಳಿಂದ ಇಡೀ ಜನ ಸಮುದಾಯಕ್ಕೆ ಶಿಕ್ಷಣ ನೀಡಲು ಪ್ರಯತ್ನಿಸುವುದು ನಮಗೆ ಅಸಾಧ್ಯವೆಂದು ಅವರಂತೆ ನನಗೂ ಅನ್ನಿಸುತ್ತದೆ. ನಾವು ಪ್ರಸ್ತುತದಲ್ಲಿ,

ನಾವು ಆಳ್ವಿಕೆ ನಡೆಸುತ್ತಿರುವ ಲಕ್ಷಾಂತರ ಪ್ರಜೆಗಳ ಹಾಗೂ ನಮ್ಮ ನಡುವಿನ ಚರ್ಚೆಗಾಗಿ ದುಭಾಷಿಗಳಾಗಿ ವ್ಯಾಖ್ಯಾನ ಮಾಡುವ ಒಂದು ವರ್ಗವನ್ನು ಸೃಷ್ಟಿಸಬೇಕಾಗಿದೆ. ಆದರೆ ಅವರು ರಕ್ತಗತವಾಗಿ ಹಾಗೂ ವರ್ಣದಲ್ಲಿ ಭಾರತೀಯರಾಗಿರಬೇಕು. ಅಭಿರುಚಿ, ಅಭಿಪ್ರಾಯಗಳು, ನೀತಿಗಳು ಮತ್ತು ಬುದ್ಧಿವಂತಿಕೆಯಲ್ಲಿ ಇಂಗ್ಲೀಷಿಗರಾಗಿರಬೇಕು. ಈ ವರ್ಗದ ಜನರಿಗೆ ನಾವು ಈ ದೇಶದ ಸ್ಥಳೀಯ ಭಾಷೆಗಳನ್ನು ಸಂಸ್ಕರಿಸುವ ಹೊಣೆಯನ್ನು ವಹಿಸಬೇಕು. ಮತ್ತು ಆ ಸ್ಥಳೀಯ ಭಾಷೆಗಳನ್ನು ಪಾಶ್ಚಿಮಾತ್ಯ ನಾಮಧೇಯಗಳಿಂದ ಪಡೆದ ವೈಜ್ಞಾನಿಕ ಪದಗಳಿಂದ ಶ್ರೀಮಂತಗೊಳಿಸಬೇಕು ಮತ್ತು ಈ ಮೂಲಕ ಜ್ಞಾನವು ಅಸಂಖ್ಯಾತ ಜನರಿಗೆ ತಲುಪಲು ಅವರನ್ನು ಸಾಧನವನ್ನಾಗಿ ಮಾಡಬೇಕು.

31. ಅಸ್ತಿತ್ವದಲ್ಲಿರುವ ಎಲ್ಲ ಹಿತಾಸಕ್ತಿಗಳನ್ನು ನಾನು ಕಟ್ಟುನಿಟ್ಟಾಗಿ ಗೌರವಿಸುತ್ತೇನೆ. ಆರ್ಥಿಕ ಮೀಸಲಾತಿಯನ್ನು ನಿರೀಕ್ಷಿಸಲು ಸಕಾರಣ ಹೊಂದಿರುವ ಎಲ್ಲ ವ್ಯಕ್ತಿಗಳೊಂದಿಗೆ ನಾನು ಉದಾರತೆಯಿಂದ ವ್ಯವಹರಿಸುತ್ತೇನೆ. ಆದರೆ ನಾನು ಇದುವರೆಗೂ ನಮ್ಮಿಂದಲೇ ಪೋಷಿಸಲ್ಪಟ್ಟ ಕೆಟ್ಟ ವ್ಯವಸ್ಥೆಯನ್ನು ಮೂಲೋತ್ಪಾಟನೆ ಮಾಡುತ್ತೇನೆ. ಅರೇಬಿಕ್ ಹಾಗೂ ಸಂಸ್ಕೃತ ಪುಸ್ತಕಗಳ ಮುದ್ರಣಕ್ಕೆ ತಡೆಯೊಡ್ಡುತ್ತೇನೆ. ಕಲ್ಕತ್ತದಲ್ಲಿರುವ ಸಂಸ್ಕೃತ ಕಾಲೇಜು ಹಾಗೂ ಮದರಸಾಗಳನ್ನು ನಿಷೇಧಿಸುತ್ತೇನೆ. ಬನಾರಸ್ ಬ್ರಾಹ್ಮಣ ಕಲಿಕೆಯ ಹೆಸರಾಂತ ಕೇಂದ್ರವಾಗಿದ್ದು, ದೆಹಲಿ ಅರೇಬಿಕ್ ಕಲಿಕೆಯ ಹೆಸರಾಂತ ಕೇಂದ್ರವಾಗಿದೆ. ನನ್ನ ಅಭಿಪ್ರಾಯದಲ್ಲಿ ನಾವು ಪೂರ್ವದ ಭಾಷೆಗಳ ಅಭಿವೃದ್ಧಿಗೆ ಸಾಕಷ್ಟು ಪ್ರಯತ್ನ ಮಾಡಿದಂತಾಗುತ್ತದೆ. ನಾವು ಬನಾರಸ್ ಮತ್ತು ದೆಹಲಿಯ ಕಾಲೇಜುಗಳನ್ನು ಹಾಗೇ ಉಳಿಸಿಕೊಳ್ಳುವುದಾದರೆ ಅಲ್ಲಿನ ಯಾವುದೇ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡಬಾರದೆಂದು ಸಲಹೆ ಮಾಡುತ್ತೇನೆ. ಆದರೆ ಎರಡು ಪ್ರತಿಸ್ಪರ್ಧಿ ಶಿಕ್ಷಣ ವ್ಯವಸ್ಥೆಗಳ ನಡುವಣ ಆಯ್ಕೆಯನ್ನು ಆ ವಿದ್ಯಾರ್ಥಿಗಳಿಗೆ ಬಿಡಲಾಗುತ್ತದೆ ಮತ್ತು ಅವರಿಗೆ ಕಲಿಯಲು ಇಷ್ಟವಿಲ್ಲದ ವಿಷಯಗಳನ್ನು ಕಲಿಯಲು ಲಂಚ ನೀಡಲಾಗುವುದಿಲ್ಲ. ಹಾಗಾಗಿ ನಿಧಿಯು ನಮ್ಮ ವಶದಲ್ಲಿರುತ್ತದೆ. ಅದರಿಂದ ಕಲ್ಕತ್ತದ ಹಿಂದೂ ಕಾಲೇಜಿಗೆ ಪ್ರೋತ್ಸಾಹ ನೀಡಲು ಸಹಾಯವಾಗುತ್ತದೆ. ಫೋರ್ಟ್ ವಿಲಿಯಂ ಮತ್ತು ಆಗ್ರಾ ಪ್ರೆಸಿಡೆನ್ಸಿಯ ಭಾಗಗಳ ಪ್ರಮುಖ ನಗರಗಳೆಲ್ಲೆಡೆಯೂ ವ್ಯಾಪಕವಾಗಿ ಇಂಗ್ಲೀಷ್ ಭಾಷೆಯನ್ನು ಚೆನ್ನಾಗಿ ಹಾಗೂ ಸಮಗ್ರವಾಗಿ ಕಲಿಸಬಹುದು.

32. ಗೌರವಾನ್ವಿತ ಕೌನ್ಸಿಲ್‌ನ ಗವರ್ನರ್ ಜನರಲ್‌ರ ತೀರ್ಮಾನವು ನಾನು ನಿರೀಕ್ಷಿಸುತ್ತಿರುವಂತಿದ್ದರೆ, ನಾನು ನನ್ನ ಕರ್ತವ್ಯಗಳಿಗೆ ಅತ್ಯಂತ ಉತ್ಸಾಹ ಮತ್ತು ಸ್ಫೂರ್ತಿಯಿಂದ ಮುನ್ನುಗ್ಗಬಹುದು. ಇನ್ನೊಂದೆಡೆಯಲ್ಲಿ ಸರ್ಕಾರದ ಅಭಿಪ್ರಾಯವು ಪ್ರಸಕ್ತ ವ್ಯವಸ್ಥೆಯು ಬದಲಾಗದೆ ಹಾಗೇ ಉಳಿಯಬೇಕೆಂಬುದಾದರೆ ನಾನು ಸಮಿತಿಯ ನನ್ನ

ಸ್ಥಾನದಿಂದ ನಿವೃತ್ತನಾಗಲು ಅನುಮತಿ ನೀಡಬೇಕೆಂದು ಕೋರುತ್ತೇನೆ. ನನಗನ್ನಿಸುವ ಮಟ್ಟಿಗೆ ನನ್ನಿಂದ ಅಲ್ಲಿ ಸ್ವಲ್ಪವೂ ಪ್ರಯೋಜನವಾಗುವುದಿಲ್ಲ. ನಾನು ದೃಢವಾಗಿ ನಂಬಿರುವ ವಿಚಾರದಿಂದ ನಾನೇ ವಿಮುಖನಾಗುವುದು ವಿರೋಧಾಭಾಸವೆಂದು ಭಾವಿಸುತ್ತೇನೆ. ಪ್ರಸಕ್ತ ವ್ಯವಸ್ಥೆಯು ಸತ್ಯದ ಪ್ರಗತಿಯನ್ನು ವರ್ಧಿಸುವುದಕ್ಕೆ ಪೂರಕವಲ್ಲ ಬದಲಾಗಿ ಅದು ಈಗಾಗಲೇ ಸಾಯುತ್ತಿರುವ ತಪ್ಪುಗಳ ಸಹಜ ಸಾವನ್ನು ಮುಂದೂಡುತ್ತದೆ ಎಂದು ನಾನು ನಂಬಿದ್ದೇನೆ. ನಾನು ಗ್ರಹಿಸಿದಂತೆ ಪ್ರಸಕ್ತವಾಗಿ ಸಾರ್ವಜನಿಕ ಶಿಕ್ಷಣ ಮಂಡಳಿಯ ಮೇಲೆ ಯಾವುದೇ ಹಕ್ಕುಗಳಿಲ್ಲ. ನಾವು ಸಾರ್ವಜನಿಕ ಹಣವನ್ನು ಅಪವ್ಯಯ ಮಾಡುವ ಮಂಡಳಿಯಾಗಿದ್ದೇವೆ. ನಾವು ಮುದ್ರಿಸುತ್ತಿರುವ ವಿಷಯಗಳು ಖಾಲಿ ಕಾಗದಕ್ಕಿಂತ ಕಡಮೆ ಮೌಲ್ಯವನ್ನು ಹೊಂದಿವೆ. ಅಸಂಬದ್ಧ ಇತಿಹಾಸ, ಅಸಂಬದ್ಧ ತತ್ತ್ವಗಳು, ಅಸಂಬದ್ಧ ಭೌತವಿಜ್ಞಾನ, ಅಸಂಬದ್ಧ ವೇದಾಂತಗಳಿಗೆ ಕೃತಕ ಪ್ರೋತ್ಸಾಹವನ್ನು ನೀಡಿ ಕೆಲವು ವಿದ್ವಾಂಸರುಗಳನ್ನು ಹುಟ್ಟು ಹಾಕುತ್ತಿದ್ದೇವೆ. ಅವರು ತಮ್ಮ ವಿದ್ವತ್ತನ್ನು ಒಂದು ಹೊರೆ ಅಥವಾ ಕಳಂಕವೆಂದು ಭಾವಿಸುತ್ತಾರೆ. ಶಿಕ್ಷಣ ಪಡೆಯುವಾಗ ಅವರು ಸಾರ್ವಜನಿಕರನ್ನು ಅವಲಂಬಿಸಿರುತ್ತಾರೆ. ಅವರ ಶಿಕ್ಷಣವು ಎಷ್ಟು ತೀರಾ ನಿರುಪಯೋಗಿಯೆಂದರೆ ಶಿಕ್ಷಣವನ್ನು ಪಡೆದ ಅನಂತರ ಇದೆಲ್ಲ ಅವರಿಗೆ ತಿಳಿಯುತ್ತದೆ. ಅವರು ಜೀವನವಿಡೀ ಉಪವಾಸವಿರಬೇಕು ಅಥವಾ ಅವರ ಇನ್ನುಳಿದ ಜೀವನಕ್ಕೆ ಮತ್ತೆ ಸಾರ್ವಜನಿಕರನ್ನು ಅವಲಂಬಿಸಬೇಕು. ಈ ಅಭಿಪ್ರಾಯಗಳನ್ನು ಮಂಡಿಸುತ್ತಾ ನಾನು ಸಾರ್ವಜನಿಕ ಶಿಕ್ಷಣ ಸಮಿತಿಯ ಜವಾಬ್ದಾರಿಗಳನ್ನು ನಿರಾಕರಿಸುತ್ತೇನೆ. ಅದು ತನ್ನ ನಡಾವಳಿಗಳ ಸ್ವರೂಪವನ್ನು ಮಾರ್ಪಡಿಸಿಕೊಳ್ಳುವವರೆಗೂ ನಾನು ಅದರ ಭಾಗಿಯಾಗಲು ಇಚ್ಛಿಸುವುದಿಲ್ಲ. ಅದರ ಪ್ರಸಕ್ತ ನೀತಿಗಳು ಬರೀ ಉಪಯೋಗಕ್ಕೆ ಬಾರದಿರುವುದಷ್ಟೆ ಅಲ್ಲದೇ ಸಕಾರಾತ್ಮಕವಾಗಿ ಕೆಡುಕನ್ನುಂಟು ಮಾಡುತ್ತವೆ.

**ಥಾ[ಮಸ್]ಬ್ಯಾ[ಬಿಂಗ್ಟನ್] ಮೆಕಾಲೆ**

೨ನೇ ಫೆಬ್ರುವರಿ ೧೮೩೫
ಈ ಟಿಪ್ಪಣಿಗಳ ಭಾವನೆಗಳಿಗೆ ನನ್ನ ಸಂಪೂರ್ಣ ಸಹಮತವಿದೆ.
ವಿ[ಲಿಯಂ] ಕಾ[ವೆಂಡಿಷ್] ಬೆಂಟಿಂಗ್

**ಇಂದ:** ಶಿಕ್ಷಣದ ಬ್ಯೂರೊ, ಶೈಕ್ಷಣಿಕ ದಾಖಲೆಗಳಿಂದ ಆಯ್ದ ಭಾಗಗಳು, ಭಾಗ-೧ (೧೭೮೧-೧೮೩೯)

**ಸಂಪಾದಕರು:** ಎಚ್. ಶಾರ್ಪ್, ಕಲ್ಕತ್ತ: ಮೇಲ್ವಿಚಾರಕರು ಸರ್ಕಾರಿ ಮುದ್ರಣಾಲಯ, ೧೯೨೦

**ಪುನರ್ ಮುದ್ರಣ:** ದೆಹಲಿ ಭಾರತದ ರಾಷ್ಟ್ರೀಯ ದಾಖಲೆಗಳು, ೧೯೬೫, ೧೦೭-೧೧೭.